# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಅಕ್ಟೋಬರ್ ೯, ೨೦೧೪ (ಆಶ್ವಯುಜ ೧೭, ಶಕ ವರ್ಷ ೧೯೩೬)<br>Bangalore, Thursday, October 9, 2014 (Aashwayuja 17, Shaka Varsha 1936) | ಸಂಚಿಕೆ ೪೦<br>Issue 40 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಆರ್‌ಡಿ 44 ಎಂಆರ್‌ಆರ್ 2014, ಬೆಂಗಳೂರು, ದಿನಾಂಕ: 25ನೇ ಜುಲೈ, 2014**

**ವಿಷಯ :** ಕಂದಾಯ/ತಿದ್ದುಪಡಿ ಅದಾಲತ್ ನಡೆಸುವ ಬಗ್ಗೆ ಮಾರ್ಗಸೂಚಿಗಳು

**ಓದಲಾಗಿದೆ :** 1. 2014–15ನೇ ಸಾಲಿನ ಅಯವ್ಯಯದಲ್ಲಿನ ಘೋಷಣೆಯಂತೆ

2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 44 ಎಂಆರ್‌ಆರ್ 2014, ದಿನಾಂಕ: 28–05–2014

ಭೂ ದಾಖಲೆಗಳ ನಿರ್ವಹಣೆ ಮತ್ತು ಇಂಡೀಕರಣ ಮಾಡುವುದು ಕಂದಾಯ ಇಲಾಖೆಯ ಪ್ರಮುಖ ಕರ್ತವ್ಯವಾಗಿರುತ್ತದೆ. ರಾಜ್ಯಾದ್ಯಾಂತ ಸುಮಾರು 1.61 ಕೋಟಿ ಪಹಣಿಗಳಿದ್ದು, ಇವುಗಳಲ್ಲಿ ಮೂಲ ಆಕಾರ್ ಬಂದ್ ನಲ್ಲಿರುವ ವಿವರಗಳಿಗೆ (ವಿಸ್ತೀರ್ಣ, ಖರಾಬು ವಿವರ, ಕಾಲಂ 3 ಮತ್ತು 9ರ ವ್ಯತ್ಯಾಸ ಇತ್ಯಾದಿ) ಹೊಂದಾಣಿಕೆಯಾಗದೆ ಇರುವ ಪಹಣಿಗಳು, ಖಾತೆದಾರರ ಹೆಸರುಗಳಲ್ಲಿ ಹಾಗೂ ಕಾಲಂ 9 ಮತ್ತು 12ರ ವ್ಯತ್ಯಾಸಗಳು ಇರುವಂತಹ ಪಹಣಿಗಳು, ಕೈ ಬರಹದ ಪಹಣಿಗಳನ್ನು ಗಣಕೀಕರಣಗೊಳಿಸುವ (ಡ್ಯಾಟಾ ಎಂಟ್ರಿ) ಸಮಯದಲ್ಲಿ ಬೆರಳಚ್ಚು ತಪ್ಪಿನಿಂದ ಸಣ್ಣ–ಪುಟ್ಟ ತಪ್ಪುಗಳಾಗಿರುವ ಪಹಣಿಗಳಿರುತ್ತವೆ.

ಇಂತಹ ಲೋಪದೋಷಗಳನ್ನು ಸರಿಪಡಿಸಲು ಪಹಣಿ ತಿದ್ದುಪಡಿ ಅರ್ಜಿಗಳ ನಿರ್ವಹಣೆಯು ವಿವಿಧ ಹಂತಗಳಲ್ಲಿ ಕಡತಗಳ ಚಲನ–ವಲನ ಮುಖಾಂತರ ನಡೆಯುವುದರಿಂದ, ರೈತರು ತಮ್ಮ ಪಹಣಿಗಳ ಲೋಪದೋಷಗಳನ್ನು ಸರಿಪಡಿಸಿಕೊಳ್ಳಲು ತಾಲ್ಲೂಕು ಕಛೇರಿಗೆ ಅಲೆದಾಡುವ ಸನ್ನಿವೇಶ ಸೃಷ್ಟಿಯಗಿದೆ. ಅಲ್ಲದೇ, ಮಧ್ಯವರ್ತಿಗಳ ಹಾವಳಿಗೆ ಆಸ್ಪದ ನೀಡಿದಂತಾಗಿ, ರೈತರು ಶೋಷಣೆಗೆ ಒಳಗಾಗುತ್ತಿದ್ದಾರೆ. ಇದನ್ನು ಸರ್ಕಾರವು ತೀವ್ರವಾಗಿ ಗಮನಿಸಿದೆ.

ಮಾನ್ಯ ಮುಖ್ಯಮಂತ್ರಿಯವರು 2014–15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸದರಿ ವಿಷಯವನ್ನು ಪ್ರಸ್ತಾಪಿಸುತ್ತಾ, ದೋಷರಹಿತ ಪಹಣಿಗಳನ್ನು ಈ ವರ್ಷದ ಅಂತ್ಯದೊಳಗೆ ರೈತರಿಗೆ ವಿತರಿಸಲಾಗುವುದು ಎಂದು ಘೋಷಿಸಿರುತ್ತಾರೆ.

ಈ ನಿಟ್ಟಿನಲ್ಲಿ ಉಲ್ಲೇಖಿತ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗ್ರಾಮ ಮಟ್ಟದಲ್ಲಿ ಕಂದಾಯ ಅದಾಲತ್‌ಗಳನ್ನು ಏರ್ಪಡಿಸಿ ಸ್ಥಳದಲ್ಲಿಯೇ ದೋಷರಹಿತ ಪಹಣಿಗಳನ್ನು ವಿತರಿಸುವ ಆಂದೋಲನವನ್ನು ಹಮ್ಮಿಕೊಳ್ಳುವ ಯೋಜನೆಯನ್ನು ಜಾರಿಗೊಳಿಸಲು ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. ಸದರಿ ಆದೇಶದಲ್ಲಿ ಈ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸುವ ದೃಷ್ಟಿಯಿಂದ ರಾಜ್ಯಾದ್ಯಂತ ಏಕರೂಪದ ಕಾರ್ಯವಿಧಾನ ಮಾರ್ಗಸೂಚಿಯನ್ನು ಹೊರಡಿಸಲಾಗುವುದು ಎಂದು ತಿಳಿಸಲಾಗಿತ್ತು.

ಕಂದಾಯ ಅದಾಲತ್ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸುವ ದೃಷ್ಟಿಯಿಂದ ರಾಜ್ಯಾದ್ಯಂತ ಏಕರೂಪದ ಕಾರ್ಯವಿಧಾನವನ್ನು ಅನುಸರಿಸಲು ಈ ಕೆಳಕಂಡಂತೆ ಮಾರ್ಗಸೂಚಿಗಳನ್ನು ನೀಡಲಾಗಿದೆ.

1. **ಕಂದಾಯ ಅದಾಲತ್ ಯೋಜನೆಯಡಿ ಮೊದಲನೇ ಹಂತದಲ್ಲಿ ಪಹಣಿಗಳಲ್ಲಿರುವ ಈ ಕೆಳಕಂಡ ಲೋಪದೋಷಗಳನ್ನು ಸರಿಪಡಿಸಲು ಕ್ರಮ ವಹಿಸಬೇಕಾಗಿರುತ್ತದೆ.**

   i. ಆಕಾರ್ ಬಂದ್ ಮತ್ತು ಪಹಣಿ ಕಾಲಂ 3ರಲ್ಲಿ ಒಟ್ಟು ವಿಸ್ತೀರ್ಣ ಎ–ಖರಾಬ್, ಬಿ–ಖರಾಬ್ ಮತ್ತು ಉಳಿಕೆ ಐನು ವಿಸ್ತೀರ್ಣ ಹೊಂದಾಣಿಕೆ ಇಲ್ಲದಿರುವ ಸರ್ವೆ ನಂಬರ್/ಪ್ರಕರಣಗಳು

ii. ಆಕಾರ್ ಬಂದ್ ಮತ್ತು ಪಹಣಿಯ ಕಾಲಂ 3ರ ವಿಸ್ತೀರ್ಣ ತಾಳೆ ಮಾಡಿದ ನಂತರ ಕಾಲಂ 3 ಮತ್ತು 9ರ ವಿಸ್ತೀರ್ಣದಲ್ಲಿ ಕಂಡು ಬಂದ ವ್ಯತ್ಯಾಸಗಳಿರುವ ಸರ್ವೆ ನಂಬರ್‌ಗಳ ಸಂಖ್ಯೆ

iii. ಪೋಡಿಯಾದರೂ, ಪಹಣಿಯಲ್ಲಿ ಇಂಡೀಕರಣವಾಗದೇ ಇರುವ ಪ್ರಕರಣಗಳು

iv. ಪಹಣಿಯಲ್ಲಿ ಕಾಲಂ (9) ಮತ್ತು ಕಾಲಂ (12)ಕ್ಕೆ ಸಮನ್ವಯಗೊಳಿಸುವುದು

v. ಪಹಣಿಯಲ್ಲಿನ ಕಾಲಂ (9) ರಲ್ಲಿನ ಖಾತೆದಾರರ ಹೆಸರುಗಳಲ್ಲಿನ ತಪ್ಪುಗಳು

vi. ಖಾತೆದಾರರು ಪೌತಿದಾರರೂ ವಾರಸುದಾರರಿಗೆ ಪೌತಿ ಖಾತೆ ಮಾಡದೇ ಇರುವುದು

vii. 2006ನೇ ಸಾಲಿಗೂ ಹಿಂದೆ ಜಮೀನು ಕ್ರಯವಾಗಿ ಕ್ರಯ ಪತ್ರ ಇದ್ದರೂ, ಕ್ರಯದಂತೆ ಖಾತೆಯಾಗದೆ ಬಾಕಿ ಇರುವ ಪ್ರಕರಣಗಳು

viii. ಬೆಳೆ ವಿವರಗಳ ಇಂಡೀಕರಣ

ix. ಖಾತೆದಾರರ ಹೆಸರುಗಳಲ್ಲಿನ ಕಾಗುಣಿತದ ತಪ್ಪುಗಳು

**2. ಪೂರ್ವ ಸಿದ್ಧತೆ :**

(1) ಮೇಲೆ ತಿಳಿಸಿದಂತಹ ವಿವಿಧ ತಪ್ಪುಗಳನ್ನು/ಇಂಡೀಕರಣಕ್ಕೆ ಬಾಕಿ ಇರುವ ಪ್ರಕರಣಗಳನ್ನು ವರ್ಗೀಕರಿಸಿದ ನಂತರ ಪಹಣಿಯಲ್ಲಿನ ಲೋಪದೋಷಗಳನ್ನು ಸರಿಪಡಿಸಲು ಕ್ರಮ ವಹಿಸುವುದು

(2) ಮೇಲಿನ ಕ್ರಮ ಸಂಖ್ಯೆ (1) (2) ಮತ್ತು (3) ರ ಲೋಪದೋಷಕ್ಕೆ ಸಂಬಂಧಿಸಿದಂತೆ ನಮೂನೆ (1) ಮತ್ತು (2) ಅನ್ನು ಬಳಸಿ ವಿವರಗಳನ್ನು ಭರ್ತಿ ಮಾಡಬೇಕು. ಕ್ರಮಸಂಖ್ಯೆ (4)ಕ್ಕೆ ಸಂಬಂಧಿಸಿದಂತೆ ಭೂಮಿ ತಂತ್ರಾಂಶದಲ್ಲಿನ ಲಭ್ಯವಿರುವ ವರದಿಯನ್ನು ಮುದ್ರಿಸಿ ವಿವರಗಳನ್ನು ಭರ್ತಿ ಮಾಡಬೇಕು. ಬಹುಪಾಲು ಲೋಪದೋಷಗಳನ್ನು ಕಛೇರಿಯಲ್ಲಿಯೇ ದಾಖಲೆಗಳನ್ನು ಆಧರಿಸಿ ಸರಿಪಡಿಸಬಹುದು. ಕೆಲವೊಂದು ಪ್ರಕರಣಗಳಲ್ಲಿ ಲೋಪದೋಷಗಳನ್ನು ಸರಿಪಡಿಸಲು ಕ್ಷೇತ್ರ ಪರಿವೀಕ್ಷಣೆಯ ಅವಶ್ಯಕತೆ ಇರುತ್ತದೆ. ಸುತ್ತೋಲೆ ಸಂಖ್ಯೆ : ಕಂಇ 104 ಭೂದಾಸ 2012, ದಿನಾಂಕ: 23–06–2012 ರ ರೀತ್ಯಾ ಪಹಣಿಯಲ್ಲಿರುವ ಲೋಪದೋಷಗಳನ್ನು ಸರಿಪಡಿಸಲು ಅನುಸರಿಸಬೇಕಾದ ಕ್ರಮಗಳನ್ನು ವಿವರವಾಗಿ ನೀಡಲಾಗಿರುತ್ತದೆ. ಸದರಿ ಸುತ್ತೋಲೆಯ ಅಂಶಗಳನ್ನು ಆಧರಿಸಿ ಪಹಣಿಯಲ್ಲಿನ ಲೋಪದೋಷಗಳನ್ನು ಸರಿಪಡಿಸಲು ಬೇಕಾಗುವ ಎಲ್ಲಾ ಮಾಹಿತಿ ಮತ್ತು ದಾಖಲೆಗಳನ್ನು ಸಿದ್ಧಪಡಿಸಿಕೊಳ್ಳುವುದು.

(3) ಸದರಿ ಸಿದ್ಧಪಡಿಸಿದ ಕಡತಗಳನ್ನು ಕಂದಾಯ ಅದಾಲತ್ ನಡೆಯುವ ಸಮಯದಲ್ಲಿ ಹಾಜರುಪಡಿಸಿ, ಖಾತೆದಾರರ ಸಮ್ಮುಖದಲ್ಲಿ ಅದಾಲತ್ ಅಧಿಕಾರಿಯಿಂದ ತಿದ್ದುಪಡಿ ಆದೇಶವನ್ನು ಹೊರಡಿಸುವುದು.

(4) ಇನ್ನು ಉಳಿದಂತೆ ಕ್ರಮಸಂಖ್ಯೆ (5) ರಿಂದ (9) ರವರೆಗಿನ ಲೋಪದೋಷಗಳಿಗೆ ಸಂಬಂಧಿಸಿದಂತೆ ರೈತರು ಸಲ್ಲಿಸುವ ಅರ್ಜಿಗಳನ್ನು ಆಧರಿಸಿ ಕ್ರಮ ವಹಿಸಬೇಕಾಗಿದೆ. ರೈತರಿಂದ ಅರ್ಜಿಯನ್ನು ಪೂರ್ವ ಮುದ್ರಿತ ನಮೂನೆಯಲ್ಲಿ ಪಡೆಯಬೇಕಾಗಿದೆ. ಆದ್ದರಿಂದ ಪೂರ್ವ ಮುದ್ರಿತ ನಮೂನೆಯನ್ನು ಸಾಕಷ್ಟು ಸಂಖ್ಯೆಯಲ್ಲಿ ಮುದ್ರಿಸಿ ಗ್ರಾಮದಲ್ಲಿ ರೈತರಿಗೆ ಒದಗಿಸಬೇಕಾಗಿರುತ್ತದೆ.

**3. ವ್ಯಾಪಕ ಪ್ರಚಾರ–ಪ್ರಚಾರ ಕಾರ್ಯಕ್ರಮ ಕಂದಾಯ ಅದಾಲತ್ತಿನ ಪ್ರಮುಖ ಅಂಶವಾಗಿದೆ.**

(1) ಕಂದಾಯ/ತಿದ್ದುಪಡಿ ಅದಾಲತ್ ಅನ್ನು ಪ್ರಾರಂಭಿಸುವ ಮೊದಲು ವ್ಯಾಪಕ ಪ್ರಚಾರವನ್ನು ಟಾಂ ಟಾಂ, ಸ್ಥಳೀಯ ಪತ್ರಿಕೆಗಳು, ಕರಪತ್ರಗಳು ಮತ್ತಿತರೆ ಮಾಧ್ಯಮಗಳ ಮೂಲಕ ಕೈಗೆತ್ತಿಕೊಳ್ಳುವುದು.

(2) ವ್ಯಾಪಕ ಪ್ರಚಾರ ನೀಡದೆ ಕಂದಾಯ/ತಿದ್ದುಪಡಿ ಅದಾಲತ್ ಅನ್ನು ನಡೆಸಬಾರದು

(3) ಕಂದಾಯ ಅದಾಲತ್ ಪ್ರಾರಂಭಿಸುವ ಒಂದು ತಿಂಗಳ ಮೊದಲೇ ನೋಟಿಸ್ ಅನ್ನು ಮುದ್ರಿಸಿ ಗ್ರಾಮದಲ್ಲಿ ಹಂಚಿ, ಖಾತೆದಾರರಿಗೆ ತಿಳುವಳಿಕೆ ನೀಡಿದ ನಂತರ ಗ್ರಾಮಲೆಕ್ಕಿಗರು ಗ್ರಾಮದಲ್ಲಿಯೇ ವಾಸ್ತವವಿದ್ದು ಪಹಣಿ ತಿದ್ದುಪಡಿ/ಕಂದಾಯ ಅದಾಲತ್‌ಗೆ ಸಂಬಂಧಿಸಿದಂತೆ ಬರುವ ಅರ್ಜಿಗಳನ್ನು ಸ್ವೀಕರಿಸಬೇಕು.

(4) ಗ್ರಾಮವಾರು ಆಗಬೇಕಾದ ಪಹಣಿಗಳ ಪಟ್ಟಿ ದಾಖಲೆಗಳನ್ನು ಪರಿಶೀಲಿಸಿ ಪೂರ್ವ ಸಿದ್ಧತೆ ಮಾಡಿಕೊಂಡಿರಬೇಕು. ಕಂದಾಯ ಅದಾಲತ್ ಪೂರ್ವಭಾವಿ ಸಿದ್ಧತೆಗಳು ಎರಡು ವಾರಗಳ ಮುಂಚೆಯೇ ಪೂರ್ಣಗೊಳಿಸಬೇಕು.

(5) ಪಹಣಿಯಲ್ಲಿ ತಿದ್ದುಪಡಿಯಿಂದ ಭಾದಿತರಾಗುವ ಎಲ್ಲಾ ಖಾತೆದಾರರಿಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರನ್ವಯ ನಿಗದಿತ ನಮೂನೆಯಲ್ಲಿ ಏಳು ದಿವಸ ಮುಂಚಿತವಾಗಿ ತಿಳುವಳಿಕೆ ನೋಟೀಸ್ ಅನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು.

(6) ಕಂದಾಯ/ತಿದ್ದುಪಡಿ ಅದಾಲತ್ ನಡೆಯುವ ಒಂದು ವಾರ ಮುಂಚಿತವಾಗಿ ಗ್ರಾಮದ ಎಲ್ಲಾ ಖಾತಾದಾರರಿಗೆ ನಿಗದಿತ ನಮೂನೆಯಲ್ಲಿ ತಿಳುವಳಿಕೆ ನೀಡಬೇಕು. ಸದರಿ ತಿಳುವಳಿಕೆಯಲ್ಲಿ ಕಂದಾಯ ಅದಾಲತ್ ನಡೆಯುವ ಸ್ಥಳ, ದಿನಾಂಕ ಮತ್ತು ಸಮಯವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಯಾವುದೇ ಕಾರಣಕ್ಕೂ ಏಳು ದಿನಗಳ ಮುಂಚಿತವಾಗಿ ಖಾತೆದಾರರಿಗೆ ತಿಳುವಳಿಕೆ ನೀಡದೇ ಅದಾಲತ್/ಆಂದೋಲನ ನಡೆಸಬಾರದು.

(7) ನಿಗದಿಯಾದ ದಿನದಂದು ಕಂದಾಯ ಅದಾಲತ್‌ನ್ನು ತಪ್ಪದೆ ನಡೆಸುವುದು ಮತ್ತು ಯಾವುದೇ ಕಾರಣಕ್ಕೂ ಮುಂದೂಡುವುದು ಅಥವಾ ರದ್ದುಪಡಿಸತಕ್ಕದಲ್ಲ.

**4. ಕಂದಾಯ ಅದಾಲತ್ ನಡೆಸಬೇಕಾದ ಸ್ಥಳ**

(1) ಕಂದಾಯ/ತಿದ್ದುಪಡಿ ಅದಾಲತ್ತನ್ನು ಕಡ್ಡಾಯವಾಗಿ ಗ್ರಾಮದಲ್ಲಿಯೇ ಕಡ್ಡಾಯವಾಗಿ ಖಾತೆದಾರರ ಸಮಕ್ಷಮ ನಡೆಸಬೇಕು

(2) ಕಂದಾಯ ಅದಾಲತ್ ಅನ್ನು ರೈತರಿಗೆ ಪರಿಚಿತವಾದ ವಿಶಾಲವಾದ ಮತ್ತು ಮೂಲಭೂತ ಸೌಕರ್ಯವುಳ್ಳ ಕಟ್ಟಡದಲ್ಲಿ ನಡೆಸಬೇಕು. ಆದಷ್ಟು ಸರ್ಕಾರಿ ಕಟ್ಟಡಗಳನ್ನು ಆಯ್ಕೆ ಮಾಡಿಕೊಳ್ಳುವುದು ಸೂಕ್ತ. ಇಂತಹ ಕಟ್ಟಡಗಳು ಲಭ್ಯವಿಲ್ಲದಿದ್ದಲ್ಲಿ, ಖಾಸಗೀ ಕಟ್ಟಡಗಳಲ್ಲಿ ಅದಾಲತ್ ಅನ್ನು ನಡೆಸಲು ನಿರ್ಧಾರ ಕೈಗೊಳ್ಳಬೇಕು. ಸರ್ಕಾರಿ/ಖಾಸಗೀ ಕಟ್ಟಡಗಳು ಲಭ್ಯವಾಗಿದಿದ್ದಲ್ಲಿ, ವಿಶಾಲವಾದ ಬಯಲಿನಲ್ಲಿ ಶಾಮಿಯಾನ ಹಾಕಿಸಿ ಕಾರ್ಯಕ್ರಮ ನಡೆಸಬಹುದಾಗಿದೆ.

(3) ಅದಾಲತ್ ದಿನದಂದು ಹಾಜರಾಗುವ ರೈತರಿಗೆ ಆಸನ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಧ್ವನಿ ವರ್ಧಕದ ವ್ಯವಸ್ಥೆ ಹಾಗೂ ಮತ್ತಿತರ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.

**5. ಕಂದಾಯ ಅದಾಲತ್ ನಡೆಸುವ ವಿಧಾನ**

(1) ಕಂದಾಯ ಅದಾಲತ್ ಅನ್ನು ಗ್ರಾಮಲೆಕ್ಕಿಗರ ವೃತ್ತವಾರು ನಡೆಸಬೇಕು. ರೈತರಿಗೆ ಅನುಕೂಲವಾಗುವ ದೃಷ್ಟಿಯಿಂದ ಎಲ್ಲಾ ಗ್ರಾಮಗಳಿಗೂ ಸಂಪರ್ಕ ಸಾಧ್ಯವಾಗುವ ಸೂಕ್ತ ಗ್ರಾಮದಲ್ಲಿ ಅದಾಲತ್ ಕಾರ್ಯವನ್ನು ಕೈಗೊಳ್ಳಬೇಕು.

(2) ಅದಾಲತ್ ಕಾರ್ಯಕ್ರಮದ ಮುಖ್ಯ ಸಂಪನ್ಮೂಲ ಗ್ರಾಮಲೆಕ್ಕಿಗರು ಖಾತೆದಾರರುಗಳಿಂದ ಒಂದು ವಾರ ಮುಂಚಿತವಾಗಿ ಸಂಗ್ರಹಿಸಿದ ಅರ್ಜಿಗಳು ಭರ್ತಿ ಮಾಡಿ ಸಿದ್ಧಗೊಳಿಸಿಕೊಂಡಿರುವ ನಮೂನೆಗಳನ್ನು ಗುರುತಿಸಿದ ತಿದ್ದುಪಡಿ ಪ್ರಕರಣಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ದಾಖಲೆಗಳೊಂದಿಗೆ ಕಡತಗಳನ್ನು ಸಿದ್ಧಪಡಿಸಿ, ಪೂರ್ವ ಮುದ್ರಿತ ಆದೇಶವನ್ನು ಭರ್ತಿ ಮಾಡಿ ಅದಾಲತ್ ನಡೆಯುವ ದಿನದಂದು ಆದೇಶಕ್ಕೆ ಮಂಡಿಸಲು ಸಿದ್ಧತೆ ಮಾಡಿಕೊಳ್ಳಬೇಕು.

(3) ಕಂದಾಯ ಅದಾಲತ್ ಕೆಲಸಕ್ಕಾಗಿ ಹೋಬಳಿಯಲ್ಲಿನ ಗ್ರಾಮಲೆಕ್ಕಿಗರು, ರಾಜಸ್ವ ನಿರೀಕ್ಷಕರು, ಉಪತಹಶೀಲ್ದಾರರು ಮತ್ತು ಇತರೆ ಕಂದಾಯ ಅಧಿಕಾರಿಗಳನ್ನು ಕಡ್ಡಾಯವಾಗಿ ಉಪಯೋಗಿಸಿಕೊಳ್ಳಬೇಕು. ಅವಶ್ಯವಿದ್ದಲ್ಲಿ, ಇತರೆ ಹೋಬಳಿಗಳಿಂದ ಗ್ರಾಮಲೆಕ್ಕಿಗರು, ರಾಜಸ್ವ ನಿರೀಕ್ಷಕರು, ಉಪತಹಶೀಲ್ದಾರರು ಮತ್ತು ಇತರೆ ಕಂದಾಯ ಅಧಿಕಾರಿಗಳನ್ನು ಸಹ ಉಪಯೋಗಿಸಿಕೊಳ್ಳತಕ್ಕದ್ದು.

(4) ಕಂದಾಯ ಅದಾಲತ್‌ಗಳನ್ನು ನಡೆಸಲು ಪ್ರಸ್ತುತವಿರುವ ಇಲಾಖಾ ಸಿಬ್ಬಂದಿ ಕೊರತೆ ಇದ್ದಲ್ಲಿ, ಹೆಚ್ಚುವರಿ ಸಿಬ್ಬಂದಿ ಅವಶ್ಯಕವಿದ್ದಲ್ಲಿ ಪ್ರತಿ ತಾಲ್ಲೂಕಿಗೆ ತಲಾ ಇಬ್ಬರು ನಿವೃತ್ತ ಕಂದಾಯ ಇಲಾಖಾ ನೌಕರರ ಸೇವೆಯನ್ನು ಬಳಸಿಕೊಳ್ಳಬಹುದು. ನಿವೃತ್ತ ಸಿಬ್ಬಂದಿಗಳಿಗೆ ಮಾಸಿಕ ಗರಿಷ್ಠ ರೂ. 15,000/–ಗಳಂತೆ ಆರು ತಿಂಗಳ ಅವಧಿಗೆ ಸಂಭಾವನೆ/ಗೌರವಧನ ಭೂಮಿ ಬಳಕೆದಾರರ ಶುಲ್ಕದಿಂದ ಪಾವತಿಸಲು ಜಿಲ್ಲಾಧಿಕಾರಿಗಳಿಗೆ ಅವಕಾಶ ಕಲ್ಪಿಸಲಾಗಿದೆ.

(5) ಕಂದಾಯ/ತಿದ್ದುಪಡಿ ಅದಾಲತ್ ಸಮಯದಲ್ಲಿ ಗ್ರಾಮಕ್ಕೆ ಸಂಬಂಧಿಸಿದ ಗ್ರಾಮಲೆಕ್ಕಿಗರು, ರಾಜಸ್ವ ನಿರೀಕ್ಷಕರು, ಉಪ ತಹಶೀಲ್ದಾರ್, ವಿಷಯ ನಿರ್ವಾಹಕರು, ಭೂಮಾಪಕರು ಅದಾಲತ್ ಕಾರ್ಯಕ್ರಮ ಪ್ರಾರಂಭವಾಗುವ ಮುಂಚೆ ಕಡ್ಡಾಯವಾಗಿ ಹಾಜರಿರಬೇಕು.

(6) ಕಂದಾಯ/ತಿದ್ದುಪಡಿ ಅದಾಲತ್ ಅನ್ನು ಸುಗಮವಾಗಿ ನಡೆಸುವ ದೃಷ್ಟಿಯಿಂದ ಹೆಚ್ಚಿನ ಸಂಖ್ಯೆಯಲ್ಲಿ ಸಿಬ್ಬಂದಿಯನ್ನು ನಿಯೋಜಿಸಿಕೊಳ್ಳಬಹುದು.

(7) ಅದಾಲತ್ ಕಾರ್ಯ ಸುಸೂತ್ರವಾಗಿ ನಡೆಸಲು ಅವಶ್ಯವಿರುವ ಎಲ್ಲಾ ಮಾಹಿತಿಯನ್ನು ಕಂದಾಯ ಅಧಿಕಾರಿಗಳು ಸಿದ್ಧಪಡಿಸಿಕೊಳ್ಳಬೇಕು ಮತ್ತು ಪಹಣಿಯಲ್ಲಿನ ಲೋಪದೋಷಗಳನ್ನು ಸರಿಪಡಿಸಲು ಬೇಕಾಗಿರುವ ದಾಖಲೆಗಳಾದ ಐ.ಎಲ್ & ಆರ್.ಆರ್. ಕೈಬರಹದ ಪಹಣಿಗಳು, ಎಂ.ಆರ್. ವಹಿಗಳು, ಆಕಾರ್ ಬಂದ್ ಮತ್ತು ಇತರೆ ದಾಖಲೆಗಳನ್ನು ಅಭಿಲೇಖಾಲಯದಿಂದ (ಸ್ವೀಕೃತಿ ನೀಡಿ) ಪಡೆದು ಕಂದಾಯ ಅದಾಲತ್ ನಡೆಯುವ ಸ್ಥಳದಲ್ಲಿ ವ್ಯವಸ್ಥೆಗೊಳಿಸುವುದು. ಮೇಲೆ ತಿಳಿಸಿದ ದಾಖಲೆಗಳನ್ನು ಅದಾಲತ್ ನಡೆಯುವ ಸ್ಥಳಕ್ಕೆ ತರದೆ ಯಾವುದೇ ಕಾರಣಕ್ಕೂ ಅದಾಲತ್ ಕಾರ್ಯವನ್ನು ಪ್ರಾರಂಭಿಸಬಾರದು.

(8) ಪೂರ್ವಭಾವಿಯಾಗಿ ಸಿದ್ಧಪಡಿಸಿದ ತಿದ್ದುಪಡಿ ಕಡತಗಳನ್ನು ಅದಾಲತ್ ಅಧಿಕಾರಿಯ ಮುಂದೆ ಹಾಜರುಪಡಿಸುವುದು.

(9) ಅದಾಲತ್ ಅಧಿಕಾರಿಯು ಕಡತಗಳನ್ನು ಪರಿಶೀಲನೆ ಮಾಡುವ ಮುಂಚೆ ಸಂಬಂಧಪಟ್ಟ ಖಾತೆದಾರರನ್ನು ಧ್ವನಿವರ್ಧಕದ ಮೂಲಕ ಪ್ರಕಟಿಸಿ ಖಾತೆದಾರರನ್ನು ಕರೆದು ಅವರ ಸಮ್ಮುಖದಲ್ಲಿ ತಿದ್ದುಪಡಿ ಆದೇಶವನ್ನು ಹೊರಡಿಸಬೇಕು. ತಿದ್ದುಪಡಿ ಆದೇಶಕ್ಕೆ ಆಕ್ಷೇಪಣೆ ವ್ಯಕ್ತಪಡಿಸುವವರು, ಖುದ್ದು ಅದಾಲತ್ ಅಧಿಕಾರಿಗಳ ಸಮಕ್ಷಮ ಹಾಜರಾಗಿ ಆಕ್ಷೇಪಣೆ ಸಲ್ಲಿಸಬಹುದಾಗಿದೆ ಎಂದು ಧ್ವನಿವರ್ಧಕದ ಮೂಲಕ ಕಡ್ಡಾಯವಾಗಿ ಪ್ರತಿ ಪ್ರಕರಣದಲ್ಲೂ ತಿಳಿಸಬೇಕು.

(10) ಪೌತಿ ಖಾತೆ ಆದೇಶವನ್ನು ಹೊರಡಿಸುವ ಮುಂಚೆ ತಪ್ಪದೆ ವಂಶವೃಕ್ಷವನ್ನು ಕಡ್ಡಾಯ ಕಂದಾಯ ಅದಾಲತ್ ಅಧಿಕಾರಿಗಳು ಪರಿಶೀಲಿಸಬೇಕು ಮತ್ತು ಧ್ವನಿವರ್ಧಕದ ಮೂಲಕ ವಾರಸುದಾರರ ಹೆಸರು ಕೂಗಿ ಹೇಳಬೇಕು.

(11) ಕಂದಾಯ ಅದಾಲತ್ ಅನ್ನು ಸಾರ್ವಜನಿಕ ಸಮ್ಮುಖದಲ್ಲಿಯೇ ನಡೆಸುವುದಲ್ಲದೆ, ತಿದ್ದುಪಡಿ ಪ್ರಕರಣಗಳ ಪಟ್ಟಿ, ಪೌತಿ ಖಾತೆಯ ಪಟ್ಟಿ ಮತ್ತು ಇತರೆ ಪ್ರಕರಣಗಳ ಪಟ್ಟಿಯನ್ನು ಸಿದ್ಧಪಡಿಸಿ ಕಂದಾಯ ಅದಾಲತ್ ನಡೆಯುವ ಸ್ಥಳದಲ್ಲಿ ಸಾರ್ವಜನಿಕರು ತಕರಾರುನ್ನು ಸಲ್ಲಿಸಲು ಪ್ರಚುರಪಡಿಸುವುದು.

(12) ಕಂದಾಯ ಅದಾಲತ್ ದಿನದಂದು ಪಹಣಿ ತಿದ್ದುಪಡಿಗೆ ಸಂಬಂಧಿಸಿದಂತೆ ಬರುವ ಅರ್ಜಿಗಳನ್ನು ಕಡ್ಡಾಯವಾಗಿ ಸ್ವೀಕರಿಸಿ, ಸ್ಥಳದಲ್ಲಿಯೇ ತಿದ್ದುಪಡಿ/ಖಾತೆ ಆದೇಶವನ್ನು ನಿಯಮಾನುಸಾರ ಹೊರಡಿಸುವುದು.

(13) ರೈತರು ವಿಭಾಗಕ್ಕೆ ಸಂಬಂಧಿಸಿದಂತೆ ಕಂದಾಯ ಅದಾಲತ್ ನಲ್ಲಿ ಅರ್ಜಿ ನೀಡುವ ಸಾಧ್ಯತೆ ಇರುತ್ತದೆ.

(14) ರೈತರು ವಿಭಾಗಕ್ಕೆ ಸಂಬಂಧಿಸಿದಂತೆ ಅರ್ಜಿಗಳನ್ನು ನೀಡಿದ್ದಲ್ಲಿ, 11–ಇ ಸ್ಕೆಚ್ ಅಗತ್ಯತೆಯನ್ನು ಪರಿಶೀಲಿಸಿ, ಅಗತ್ಯತೆ ಕಂಡುಬಂದರೆ 11–ಇ ಸ್ಕೆಚ್‌ಗೆ ನಿಗದಿಪಡಿಸಿರುವ ಶುಲ್ಕವನ್ನು ಸ್ಥಳದಲ್ಲೇ ಪಡೆದು ಅರ್ಜಿಯನ್ನು ದಾಖಲು ಮಾಡಿಕೊಳ್ಳಬೇಕು. ಮುಂದುವರೆದು 11–ಇ ಸ್ಕೆಚ್ ಸಿದ್ಧವಾದ ನಂತರ ವಿಭಾಗದನ್ವಯ ಖಾತೆ ಬದಲಾವಣೆಯನ್ನು ಭೂಮಿ ತಂತ್ರಾಂಶದಲ್ಲಿ ಸ್ವಯಂಚಾಲಿತವಾಗಿ ಪ್ರಾರಂಭಿಸಬೇಕು. 11–ಇ ನಕ್ಷೆಗೆ ನಿಗದಿ ಪಡಿಸಿರುವ ಶುಲ್ಕವನ್ನು ಸರ್ವೆ ಸೂಪರ್‌ವೈಸರ್ ಇವರು ರೈತರಿಂದ ಸಂಗ್ರಹಿಸುವುದು ಮತ್ತು ಕಡ್ಡಾಯವಾಗಿ ರಸೀದಿಯನ್ನು ನೀಡಬೇಕು. ADLR ರವರು ಸಂಗ್ರಹಿಸಿದ ಶುಲ್ಕವನ್ನು ಸರ್ಕಾರಕ್ಕೆ ಜಮೆ ಮಾಡಿರುವ ಬಗ್ಗೆ ಖಾತರಿ ಪಡಿಸಿಕೊಳ್ಳುವುದು.

(15) ಪ್ರತಿ ಆದೇಶಗಳನ್ನು ಅಂದರೆ ತಿದ್ದುಪಡಿ ಆದೇಶ, ಪೌತಿ ಖಾತೆ ಆದೇಶ, ಹಳೆಯ ಕ್ರಯ ಪತ್ರದನ್ವಯ ಖಾತೆ ಬದಲಾವಣೆ ಆದೇಶ ಹೊರಡಿಸಲು ಪೂರ್ವ ಮುದ್ರಿತ ನಮೂನೆಗಳನ್ನು ಬಳಸುವುದು. ಇದರಿಂದಾಗಿ ಪ್ರಕರಣಗಳನ್ನು ತ್ವರಿತವಾಗಿ ವಿಲೇವಾಗಿ ಮಾಡಲು ಸಹಕಾರಿಯಾಗುತ್ತದೆ.

(16) ಕಂದಾಯ ಅದಾಲತ್ ನಡೆಯುವ ದಿನ ವಿವಿಧ ಪ್ರಕರಣಗಳಿಗೆ ಸಂಬಂಧಿಸಿದಂತೆ ಅನುಸರಿಸಬೇಕಾದ ಕ್ರಮಗಳನ್ನು ಅನುಬಂಧ–1, 2 ಮತ್ತು 3ರಲ್ಲಿ ವಿವರಿಸಲಾಗಿದ್ದು, ಸದರಿ ಸೂಚನೆಗಳನ್ನು ಸಂಬಂಧಪಟ್ಟ ಅಧಿಕಾರಿಗಳು ತಪ್ಪದೇ ಪಾಲಿಸತಕ್ಕದ್ದು.

**6. ಕಂದಾಯ ಅದಾಲತ್ ಯೋಜನೆಯನ್ನು ಪೂರ್ಣಗೊಳಿಸಬೇಕಾಗಿರುವ ಅವಧಿ**

(1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 44 ಎಂಆರ್‌ಆರ್ 2014, ದಿನಾಂಕ: 28–05–2014ರಲ್ಲಿ ಕಂದಾಯ ಅದಾಲತ್ ಕಾರ್ಯಕ್ರಮವನ್ನು ಪ್ರಸ್ತುತ ವರ್ಷದೊಳಗೆ ಪೂರ್ಣಗೊಳಿಸಲು ಸೂಚಿಸಿರುವುದರಿಂದ, ಜಿಲ್ಲಾಧಿಕಾರಿಗಳು ತಾಲ್ಲೂಕು ಹಾಗೂ ಗ್ರಾಮವಾರು ಸೂಕ್ತ ವೇಳಾ ಪಟ್ಟಿ ರೂಪಿಸಿ ಸರ್ಕಾರಕ್ಕೆ ಸಲ್ಲಿಸಬೇಕು.

**7. ಈ ಯೋಜನೆಗೆ ಲಭ್ಯವಿರುವ ಅನುದಾನ**

(1) ರೈತರಿಗೆ ಆಸನ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಧ್ವನಿವರ್ಧಕದ ವ್ಯವಸ್ಥೆ ಹಾಗೂ ಮತ್ತಿತರ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಪ್ರತಿ ಕಂದಾಯ ಅದಾಲತ್‌ಗೆ ರೂ. 2,000/–

(2) ಪ್ರತಿ ತಾಲ್ಲೂಕಿಗೆ ತಲಾ 2 ನಿವೃತ್ತ ಕಂದಾಯ ಸಿಬ್ಬಂದಿಗಳಿಗೆ ಮಾಸಿಕ ಗರಿಷ್ಠ ರೂ. 15,000/–ಗಳಂತೆ ಆರು ತಿಂಗಳ ಅವಧಿಗೆ ಸಂಭಾವನೆ/ಗೌರವಧನ.

(3) ಪ್ರತಿ ತಾಲ್ಲೂಕಿಗೆ ತಲಾ 2 ಆಪರೇಟರ್‌ಗಳಿಗೆ ಮಾಸಿಕ ಗರಿಷ್ಠ ರೂ. 10,000/–ಗಳಂತೆ ಆರು ತಿಂಗಳ ಅವಧಿಗೆ ಸಂಭಾವನೆ.

(4) ಕಡತದ ಕವಚ ಮುದ್ರಣ, ಜೆರಾಕ್ಸ್ & ಲೇಖನ ಸಾಮಾಗ್ರಿಗಳ ವೆಚ್ಚ ಪ್ರತಿ ಕಂದಾಯ ಅದಾಲತ್‌ಗೆ ರೂ. 1000/–

(5) ಈ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಭೂಮಿ ಬಳಕೆದಾರರ ಶುಲ್ಕದಿಂದ ಭರಿಸಲು ಅನುಮತಿ ನೀಡಲಾಗಿದೆ.

**8. ಕಂದಾಯ ಅದಾಲತ್ ಅಧಿಕಾರಿಗಳು**

(1) ಪ್ರತಿ ಜಿಲ್ಲೆಯಲ್ಲಿ ಒಬ್ಬರು/ಇಬ್ಬರು ಉಪವಿಭಾಗಾಧಿಕಾರಿಗಳಿದ್ದು ತಿದ್ದುಪಡಿ ಅದಾಲತ್ ಅನ್ನು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ನಿರ್ವಹಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಹೆಚ್ಚಿನ ಅಧಿಕಾರಿಗಳನ್ನು ಈ ಕಾರ್ಯಕ್ಕೆ ಬಳಸಿಕೊಳ್ಳುವುದು ಸೂಕ್ತವಾಗಿದ್ದು, ಆರು ತಿಂಗಳ ಅವಧಿಗೆ ಕಂದಾಯ ಅದಾಲತ್ ನಡೆಸಲು ಸಂಬಂಧಪಟ್ಟ ತಾಲ್ಲೂಕು ತಹಶೀಲ್ದಾರರಿಗೆ ಅಧಿಕಾರ ನೀಡಲಾಗುವುದು. ಆದರೆ ಮೊದಲಿಗೆ ಜಿಲ್ಲೆಯ ಪ್ರತೀ ತಾಲ್ಲೂಕಿನ ಒಂದು ಹೋಬಳಿಯ ಎಲ್ಲಾ ಗ್ರಾಮದ ಕಂದಾಯ ಅದಾಲತ್ ಅನ್ನು ಜಿಲ್ಲಾಧಿಕಾರಿ ಅಥವಾ ಉಪ ವಿಭಾಗಾಧಿಕಾರಿಗಳು ನಡೆಸಬೇಕು. ನಂತರದ ಕಂದಾಯ ಅದಾಲತ್‌ಗಳನ್ನು ತಹಶೀಲ್ದಾರರು ನಡೆಸಲು ಅಧಿಕಾರ ನೀಡಲಾಗುವುದು. ಜಿಲ್ಲಾಧಿಕಾರಿಗಳು ತಮ್ಮ ಜಿಲ್ಲೆಯಲ್ಲಿ ಕನಿಷ್ಠ ಒಂದು ಹೋಬಳಿಗೆ ಸಂಬಂಧಿಸಿದ ಎಲ್ಲಾ ಗ್ರಾಮದ ಕಂದಾಯ ಅದಾಲತ್ ಅನ್ನು ನಡೆಸಬೇಕು.

(2) ಆರು ತಿಂಗಳ ಅವಧಿಗೆ ಕಂದಾಯ ಅದಾಲತ್ ನಡೆಸಿ ತಿದ್ದುಪಡಿ ಮಾಡಲು ಸಂಬಂಧಪಟ್ಟ ತಾಲ್ಲೂಕು ತಹಶೀಲ್ದಾರರಿಗೆ ಅಧಿಕಾರ ನೀಡುವ ಕುರಿತು ಸರ್ಕಾರದಿಂದ ಪ್ರತ್ಯೇಕ ಅಧಿಸೂಚನೆ ಹೊರಡಿಸಲಾಗುವುದು. ಅಲ್ಲಿಯವರೆಗೆ ಕಂದಾಯ ಅದಾಲತ್‌ಗಳನ್ನು ಉಪವಿಭಾಗಾಧಿಕಾರಿಗಳು ನಡೆಸಬೇಕಾಗಿದೆ.

**9. ಭೂಮಿ ತಂತ್ರಾಂಶಲ್ಲಿ ಮ್ಯುಟೇಷನ್ ಪ್ರಾರಂಭಿಸುವಿಕೆ**

(1) ಕಂದಾಯ ಅದಾಲತ್‌ನಲ್ಲಿ ಆದೇಶ ಹೊರಡಿಸಿದ ಮರುದಿನವೇ ಭೂಮಿ ತಂತ್ರಾಂಶದಲ್ಲಿ ಖಾತೆ ಬದಲಾವಣೆಯ ಪ್ರಕ್ರಿಯೆಯನ್ನು ಪ್ರಾರಂಭಿಸಬೇಕು. ಮ್ಯುಟೇಷನ್ ಆದೇಶಗಳನ್ನು ಗ್ರಾಮವಾರು ವಿಂಗಡಿಸಿಕೊಂಡು ನಮೂದಿಸುವ ಕ್ರಮ ವಹಿಸಿದರೆ ವಿಳಂಬ ತಪ್ಪಿಸಬಹುದು ಮತ್ತು ತ್ವರಿತವಾಗಿ ಪ್ರಕರಣಗಳನ್ನು ಅನುಮೋದಿಸಲು ಸಾಧ್ಯವಾಗುತ್ತದೆ.

**10. ಮಾಸ್ಟರ್ ತರಬೇತಿದಾರರನ್ನು ಗುರುತಿಸುವುದು**

(1) ಕಂದಾಯ ಅದಾಲತ್‌ನಲ್ಲಿ ರಾಜ್ಯಾದ್ಯಂತ ಏಕರೂಪದಲ್ಲಿ ನಿರ್ದಿಷ್ಟ ಕಾಲಮಿತಿಯಲ್ಲಿ ಕೈಗೊಳ್ಳಬೇಕಾಗಿರುವುದರಿಂದ ಕಂದಾಯ ಅಧಿಕಾರಿಗಳಿಗೆ ತರಬೇತಿ ನೀಡುವ ಅವಶ್ಯಕತೆ ಇರುತ್ತದೆ. ಅದ್ದರಿಂದ ಜಿಲ್ಲಾಧಿಕಾರಿಗಳು ಪ್ರತಿ ಜಿಲ್ಲೆಯ ನಾಲ್ಕು ಅಧಿಕಾರಿ/ಸಿಬ್ಬಂದಿಗಳನ್ನು ಗುರುತಿಸಿ ಭೂಮಿ ಉಸ್ತುವಾರಿ ಕೋಶಕ್ಕೆ ಒದಗಿಸಬೇಕಾಗಿದೆ. ಜಿಲ್ಲಾಧಿಕಾರಿಗಳು ಗುರುತಿಸಿದ ಅಧಿಕಾರಿ/ಸಿಬ್ಬಂದಿಗಳಿಗೆ ಕಂದಾಯ ಅದಾಲತ್ ನಡೆಸುವ ವಿಧಾನದ ಬಗ್ಗೆ ಭೂಮಿ ಉಸ್ತುವಾರಿ ಕೋಶ ತರಬೇತಿಯನ್ನು ಒದಸಲಾಗುವುದು. ನಂತರ ಈ ಅಧಿಕಾರಿ/ಸಿಬ್ಬಂದಿಗಳು ತಮ್ಮ ಜಿಲ್ಲೆಯ ಕಂದಾಯ ಅಧಿಕಾರಿ/ಸಿಬ್ಬಂದಿಗಳಿಗೆ ಕಂದಾಯ ಅದಾಲತ್ ನಡೆಸುವ ವಿಧಾನದ ಬಗ್ಗೆ ತರಬೇತಿ ನೀಡುತ್ತಾರೆ.

**11. ಕಂದಾಯ ಅದಾಲತ್ ಮೇಲುಸ್ತುವಾರಿ ಮತ್ತು ವರದಿ ಸಲ್ಲಿಸುವುದು**

(1) ಕಂದಾಯ ಅದಾಲತ್ ಯೋಜನೆಯ ಅನುಷ್ಠಾನದ ಮೇಲುಸ್ತುವಾರಿಕೆ ಜವಾಬ್ದಾರಿಯು ಆಯುಕ್ತರು ಭೂಮಾಪನ ಇಲಾಖೆ ಹಾಗೂ ಪದನಿಮಿತ್ತ ನಿರ್ದೇಶಕರು (ಭೂಮಿ & ಯು.ಪಿ.ಓ.ಆರ್.) ಬೆಂಗಳೂರು ಇವರದ್ದಾಗಿದ್ದು, ಅನುಷ್ಠಾನದ ಪ್ರಗತಿಯ ವರದಿಯನ್ನು ಜಿಲ್ಲಾಧಿಕಾರಿಗಳು ಪ್ರತಿ ವಾರ ಆಯುಕ್ತರು ಭೂಮಾಪನ ಇಲಾಖೆ ಹಾಗೂ ಪದನಿಮಿತ್ತ ನಿರ್ದೇಶಕರು (ಭೂಮಿ & ಯು.ಪಿ.ಓ.ಆರ್.) ಬೆಂಗಳೂರು ಇವರಿಗೆ ಸಲ್ಲಿಸಬೇಕು, ಇವರು ವರದಿಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಅನುಸರಣಾ ವರದಿಯನ್ನು ಸಲ್ಲಿಸತಕ್ಕದ್ದು.

ಈ ಸುತ್ತೋಲೆಯನ್ನು ನೀಡಿರುವ ಮಾರ್ಗಸೂಚಿಗಳನ್ನು ಎಲ್ಲಾ ಕಂದಾಯ ಅಧಿಕಾರಿಗಳು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಎಂ. ತಿಪ್ಪೀರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ

**ಅನುಬಂಧ–1**

**(ತಿದ್ದುಪಡಿ ಪ್ರಕರಣಗಳಿಗೆ)**

1. ಕಛೇರಿಯಲ್ಲಿ ನಮೂನೆಯನ್ನು ಭರ್ತಿ ಮಾಡಿದ ಮತ್ತು ರೈತರಿಂದ ಅರ್ಜಿಯನ್ನು ಸ್ವೀಕರಿಸಿದ ನಂತರ
   i. ಆಕಾರ್‌ಬಂದ್ ಮತ್ತು ಪಹಣಿ ಕಾಲಂ 3ರಲ್ಲಿ ಒಟ್ಟು ವಿಸ್ತೀರ್ಣ, ಎ–ಖರಾಬ್, ಬಿ–ಖರಾಬ್ ಮತ್ತು ಉಳಿಕೆ ಐನು ವಿಸ್ತೀರ್ಣ ಹೊಂದಾಣಿಕೆ ಇಲ್ಲದಿರುವ ಸರ್ವೆ ನಂಬರ್/ಪ್ರಕರಣಗಳು
   ii. ಆಕಾರ್ ಬಂದ್ ಮತ್ತು ಪಹಣಿಯ ಕಾಲಂ 3ರ ವಿಸ್ತೀರ್ಣ ತಾಳೆ ಮಾಡಿದ ನಂತರ ಕಾಲಂ 3 ಮತ್ತು 9ರ ವಿಸ್ತೀರ್ಣದಲ್ಲಿ ಕಂಡು ಬಂದ ವ್ಯತ್ಯಾಸಗಳಿರುವ ಸರ್ವೆ ನಂಬರುಗಳ ಸಂಖ್ಯೆ
   iii. ಹೆಸರುಗಳಲ್ಲಿನ ಕಾಗುಣಿತ ತಪ್ಪುಗಳು ------------------------
   iv. ಪೋಡಿಯಾದರೂ, ಪಹಣಿಯಲ್ಲಿ ಇಂಡೀಕರಣವಾಗದೇ ಇರುವ ಪ್ರಕರಣಗಳನ್ನು ಪ್ರತ್ಯೇಕವಾಗಿ ಪಟ್ಟಿ ಮಾಡುವುದು
2. ಪಹಣಿ ತಿದ್ದುಪಡಿ ಪ್ರಕರಣಗಳಲ್ಲಿ ಅವಶ್ಯಕ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ತಿದ್ದುಪಡಿ ಅವಶ್ಯವೆಂದು ಖಾತರಿ ಪಡಿಸಿಕೊಂಡು ತಿದ್ದುಪಡಿ ಕ್ರಮ ಅನುಸರಿಸುವುದು
3. ಪ್ರತಿಯೊಂದು ತಿದ್ದುಪಡಿ ಪ್ರಕರಣಕ್ಕೂ ಪ್ರತ್ಯೇಕ ಕಡತ ನಿರ್ವಹಿಸುವುದು. ಕಡತ ಕವಚದ ಮೇಲೆ ಕಂದಾಯ ಅದಾಲತ್ ಶೀರ್ಷಿಕೆಯಡಿ 1) ಕಡತದ ಸಂಖ್ಯೆ, 2) ಕಡತ ಪ್ರಾರಂಭಿಸಿದ ದಿನಾಂಕ, 3) ಸಂಕ್ಷಿಪ್ತ ವಿಷಯ, 4) ತಾಲ್ಲೂಕಿನ ಹೆಸರು, 5) ಹೋಬಳಿ ಹೆಸರು, 6) ಗ್ರಾಮದ ಹೆಸರು, 7) ಸರ್ವೆ ನಂಬರ್ ಈ ಅಂಶಗಳುಳ್ಳ ನಮೂನೆಯ ಪ್ರತಿಗಳನ್ನು ಮುದ್ರಿಸಿಟ್ಟುಕೊಳ್ಳಬೇಕು.
4. ತಿದ್ದುಪಡಿ ಪ್ರಕರಣಗಳಿಗೆ ಸುತ್ತೋಲೆ ರೀತ್ಯ ತೀರ್ಮಾನ ತೆಗೆದುಕೊಳ್ಳಬೇಕು.
5. ತಿದ್ದುಪಡಿ ಪ್ರಕರಣಗಳಿಗೆ ಸಂಬಂಧಿಸಿದಂತೆ, ಸಂಬಂಧಿತ ಎಲ್ಲಾ ಅಧಿಕಾರಿ/ನೌಕರರ ಟಿಪ್ಪಣಿ ಪೂರ್ಣಗೊಂಡು ಕಂದಾಯ ಅದಾಲತ್ ಅಧಿಕಾರಿಗಳ ಆದೇಶ ಹೊರಡಿಸಲು ಮಾತ್ರ ಬಾಕಿ ಇರುವಂತೆ ಸಿದ್ಧಪಡಿಸಬೇಕು.
6. ಈಗಾಗಲೇ ಕಛೇರಿಗೆ ಸಲ್ಲಿಸಲಾಗಿರುವ ತಿದ್ದುಪಡಿ ಅರ್ಜಿಗಳು ಮತ್ತು ಮೋಜಣಿ ತಂತ್ರಾಂಶದಿಂದ ತಿದ್ದುಪಡಿಗೆ ಬರುವಂತಹ ಅರ್ಜಿಗಳನ್ನು ಸಹ ಅದಾಲತ್‌ನಲ್ಲಿ ಸ್ವೀಕೃತವಾಗುವ ಅರ್ಜಿಗಳೊಂದಿಗೆ ಸೇರಿಸಿಕೊಳ್ಳಬೇಕು.
7. ಆದೇಶಗಳನ್ನು ಪೂರ್ವ ಮುದ್ರಿತ ನಮೂನೆಯಲ್ಲಿ ಸಿದ್ಧಪಡಿಸಿ ಮತ್ತು ಪೂರಕ ದಾಖಲೆಗಳೊಂದಿಗೆ ಕಡತದಲ್ಲಿ ಸಿದ್ಧಪಡಿಸಬೇಕು.
8. ದಾಖಲಾತಿಗಳ ಪರಿಶೀಲನೆ ಮತ್ತು ತಿದ್ದುಪಡಿಗೆ ಕಡತಗಳನ್ನು ಕಂದಾಯ ಅದಾಲತ್ ದಿನಾಂಕದ ಒಂದು ವಾರ ಮುಂಚಿತವಾಗಿಯೇ ಸಿದ್ಧಪಡಿಸಿಕೊಳ್ಳುವುದು.
9. ಖಾತೆದಾರರಿಂದ ಸ್ವೀಕೃತಿ ಪಡೆದ ತಿಳುವಳಿಕೆ ಪತ್ರ ಮತ್ತು ತಿದ್ದುಪಡಿಯಿಂದ ಬಾಧಿತರಾಗಿರುವವರಿಗೆ ನೀಡಿರುವ ನೋಟೀಸು ಕಡತದಲ್ಲಿ ಸೇರಿಸಿಟ್ಟುಕೊಳ್ಳಬೇಕು.
10. ಸಿದ್ಧಪಡಿಸಿದ ಕಡತಗಳನ್ನು ಕಂದಾಯ ಅದಾಲತ್ ನಡೆಯುವ ದಿವಸ ಕಂದಾಯ ಅದಾಲತ್ ಅಧಿಕಾರಿಗೆ ತಿದ್ದುಪಡಿ ಆದೇಶಕ್ಕಾಗಿ ಮಂಡಿಸುವುದು.
11. ಆದೇಶ ಪಡೆದ ನಂತರ ಕಡತವನ್ನ ಮ್ಯುಟೇಷನ್ ಪ್ರಕ್ರಿಯೆಯನ್ನು ಪ್ರಾರಂಭಿಸಲು ಭೂಮಿ ಕೇಂದ್ರಕ್ಕೆ ರವಾನಿಸುವುದು.
12. ಮ್ಯುಟೇಷನ್ ಆದ ನಂತರ ಕಡತವನ್ನು ಅಭಿಲೇಖಾಲಯದಲ್ಲಿ ಸುರಕ್ಷಿತವಾಗಿ ಸಂರಕ್ಷಿಸುವುದು.

ಸುತ್ತೋಲೆ ಸಂಖ್ಯೆ: ಆರ್‌ಡಿ 44 ಎಂಆರ್‌ಆರ್ 2014.

**ಎಂ. ತಿಪ್ಪೀರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ

**ಅನುಬಂಧ–2**

**(ಪೌತಿ ಪ್ರಕರಣಗಳು)**

1. ಕಂದಾಯ ಅದಾಲತ್ ಬಗ್ಗೆ ತಿಳುವಳಿಕೆ/ಪ್ರಚಾರ ನೀಡಿದ ನಂತರ, ರೈತರಿಂದ ಪೌತಿ ಖಾತೆ ಕೋರಿ ಬರುವ ಅರ್ಜಿಗಳನ್ನು ಪಟ್ಟಿ ಮಾಡಬೇಕು.

2. ಪೌತಿ ಖಾತೆಯಾಗದೆ ಇದ್ದ ಪ್ರಕರಣಗಳನ್ನು ಗ್ರಾಮಲೆಕ್ಕಾಧಿಕಾರಿಯು ಸ್ವಯಂಪ್ರೇರಿತವಾಗಿ ಗುರುತಿಸಿ ಪಟ್ಟಿ ಮಾಡಿ ಪೌತಿ ಖಾತೆ ಮಾಡಲು ಕ್ರಮ ವಹಿಸಬೇಕು.

3. ಸಂಬಂಧಪಟ್ಟ ಗ್ರಾಮಲೆಕ್ಕಾಧಿಕಾರಿಯು ಅರ್ಜಿದಾರರ ವಂಶವೃಕ್ಷವನ್ನು ಸಿದ್ಧಪಡಿಸಬೇಕು. ಸಿದ್ಧಪಡಿಸಿದ ವಂಶವೃಕ್ಷವನ್ನು ರಾಜಸ್ವ ನಿರೀಕ್ಷಕರು ಕ್ಷೇತ್ರ ಪರಿಶೀಲನೆ ನಡೆಸಿ ದೃಢೀಕರಿಸಬೇಕು. ರಾಜಸ್ವ ನಿರೀಕ್ಷಕರು ಯಾವುದೇ ಕಾರಣಕ್ಕೂ ಕ್ಷೇತ್ರ ಪರಿಶೀಲನೆ ಮಾಡದೇ ದೃಢೀಕರಿಸಬಾರದು. ಈ ಕುರಿತು ಲೋಪದೋಷಗಳು ಕಂಡುಬಂದಲ್ಲಿ ಸಂಬಂಧಪಟ್ಟ ಗ್ರಾಮಲೆಕ್ಕಿಗರು/ರಾಜಸ್ವ ನಿರೀಕ್ಷಕರೇ ನೇರ ಹೊಣೆಗಾರರಾಗುತ್ತಾರೆ. ಕ್ಷೇತ್ರ ಪರಿಶೀಲನೆ ಸಮಯದಲ್ಲಿ ಸಾರ್ವಜನಿಕರಿಂದ ಆಕ್ಷೇಪಣೆಗಳೇನಾದರೂ ಬಂದಲ್ಲಿ ಸತ್ಯಾಸತ್ಯತೆಯ ಬಗ್ಗೆ ಉಪತಹಶೀಲ್ದಾರರು ಸಂಕ್ಷಿಪ್ತ ವಿಚಾರಣೆ ಮಾಡಿ ದೃಢಪಡಿಸಬೇಕು. ಆಕ್ಷೇಪಣೆಗಳಿಲ್ಲದ ಪ್ರಕರಣಗಳಲ್ಲಿ ಉಪತಹಶೀಲ್ದಾರರು ಗ್ರಾ.ಲೆ./ರಾಜಸ್ವ ನಿರೀಕ್ಷಕರ ವರದಿಯನ್ನು ಪರಿಶೀಲಿಸಿ ದೃಢೀಕರಿಸಬೇಕು.

4. ವಂಶವೃಕ್ಷದಲ್ಲಿ ನಮೂದಿಸಿರುವ ವಾರಸುದಾರರಿಗೆ ಕಡ್ಡಾಯವಾಗಿ ಏಳು ದಿನ ಮುಂಚಿತವಾಗಿ ಕೆಎಲ್‌ಆರ್ ಕಾಯ್ದೆ

5. ಪೌತಿ ಖಾತೆಗೆ ಅರ್ಜಿ ಸಲ್ಲಿಸಿರುವ ವಿವರಗಳನ್ನು ಪಟ್ಟಿ ಮಾಡಿ ಕಂದಾಯ ಅದಾಲತ್ ನಡೆಸುವ ಸ್ಥಳದಲ್ಲಿ ಪ್ರಕಟಿಸಬೇಕು.

6. ಕಂದಾಯ ಅದಾಲತ್ ಸಮಯದಲ್ಲಿ ಧ್ವನಿವರ್ಧಕದ ಮುಖಾಂತರ ಅರ್ಜಿದಾರರ ಹೆಸರನ್ನು ಮತ್ತು ಪ್ರಕರಣದ ವಿವರಗಳನ್ನು ಸಾರ್ವಜನಿಕರಿಗೆ ತಿಳಿಸಿ, ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಸಲ್ಲಿಸುವಂತೆ ಪ್ರಕಟಿಸಬೇಕು.

7. ಆಕ್ಷೇಪಣೆಗಳು ಬಂದರೆ ಕಂದಾಯ ಅದಾಲತ್ ಅಧಿಕಾರಿಯು ಸಂಕ್ಷಿಪ್ತ ವಿಚಾರಣೆ ನಡೆಸಿ ಸೂಕ್ತ ಆದೇಶ ಹೊರಡಿಸುವುದು.

8. ಪೌತಿ ಖಾತೆಯ ಸಮಯದಲ್ಲಿ ವಾರಸುದಾರರು ನೋಂದಾಯಿತ ಹಕ್ಕು ಬಿಡುಗಡೆ ಪತ್ರವನ್ನು ಹಾಜರುಪಡಿಸಿದಲ್ಲಿ ಹಕ್ಕು ಬಿಡುಗಡೆ ಪತ್ರವನ್ನು ಮಾನ್ಯ ಮಾಡಿ ಆದೇಶ ಹೊರಡಿಸುವುದು. ಇದಲ್ಲದೆ ಕಂದಾಯ ಅದಾಲತ್ ಅಧಿಕಾರಿಯ ಮುಂದೆ ಎಲ್ಲಾ ವಾರಸುದಾರರು ಹಾಜರಾಗಿ ಗ್ರಾಮಲೆಕ್ಕಾಧಿಕಾರಿಯು ಗುರುತಿಸಿದರೆ ಅಂತಹ ಪ್ರಕರಣಗಳಲ್ಲಿ ವಾರಸುದಾರರ ಹಕ್ಕು ಬಿಡುಗಡೆಯ ಬಗ್ಗೆ ಪ್ರಸ್ತಾಪಿಸಿದರೆ ಕೋರಿಕೆಯನ್ನು ಪ್ರಕರಣವಾರು ಪರಿಗಣಿಸಬಹುದು. ಇಂತಹ ಪ್ರಕರಣಗಳಲ್ಲಿ ಕಂದಾಯ ಅದಾಲತ್ ಅಧಿಕಾರಿಯು ವಿಚಾರಣೆ ನಡೆಸಿ ಆದೇಶದಲ್ಲಿ ತಪ್ಪದೇ ವಿಚಾರಣೆ ಬಗ್ಗೆ ನಮೂದಿಸಿ ಪೌತಿ ಖಾತೆ ಆದೇಶವನ್ನು ಪೂರ್ವ ಮುದ್ರಿತ ನಮೂನೆಯಲ್ಲಿ ಹೊರಡಿಸುವುದು.

9. ಪ್ರತಿಯೊಂದು ತಿದ್ದುಪಡಿ ಪ್ರಕರಣದಲ್ಲೂ ಪ್ರತ್ಯೇಕ ಕಡತ ನಿರ್ವಹಿಸುವುದು. ಕಡತ ರಾಪರ್ ಮೇಲೆ ಕಂದಾಯ ಅದಾಲತ್ ಶೀರ್ಷಿಕೆಯಡಿ 1) ಕಡತದ ಸಂಖ್ಯೆ 2) ಕಡತ ಪ್ರಾರಂಭಿಸಿದ ದಿನಾಂಕ 3) ಸಂಕ್ಷಿಪ್ತ ವಿಷಯ 4) ತಾಲ್ಲೂಕಿನ ಹೆಸರು 5) ಹೋಬಳಿ ಹೆಸರು 6) ಗ್ರಾಮದ ಹೆಸರು 7) ಸರ್ವೆ ನಂಬರ್ ಈ ಅಂಶಗಳುಳ್ಳ ನಮೂನೆಯ ಪ್ರತಿಗಳನ್ನು ಮುದ್ರಿಸಿಟ್ಟುಕೊಳ್ಳಬೇಕು.

10. ತಿದ್ದುಪಡಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಸಂಬಂಧಿತ ಎಲ್ಲಾ ಅಧಿಕಾರಿ/ನೌಕರರ ಟಿಪ್ಪಣಿ ಪೂರ್ಣಗೊಂಡು ಕಂದಾಯ ಅದಾಲತ್ ಅಧಿಕಾರಿಗಳ ಆದೇಶ ಹೊರಡಿಸಲು ಮಾತ್ರ ಬಾಕಿ ಇರುವಂತೆ ಸಿದ್ಧಪಡಿಸಬೇಕು.

11. ಈಗಾಗಲೇ ಕಛೇರಿಗೆ ಸಲ್ಲಿಸಲಾಗಿರುವ ತಿದ್ದುಪಡಿ ಅರ್ಜಿಗಳು ಮತ್ತು ಮೋಜಣಿ ತಂತ್ರಾಂಶದಿಂದ ತಿದ್ದುಪಡಿಗೆ ಬರುವಂತಹ ಅರ್ಜಿಗಳನ್ನು ಸಹ ಅದಾಲತ್‌ನಲ್ಲಿ ಸ್ವೀಕೃತವಾಗುವ ಅರ್ಜಿಗಳೊಂದಿಗೆ ಸೇರಿಸಿಕೊಳ್ಳಬೇಕು.

12. ತಿದ್ದುಪಡಿ ಪ್ರಕರಣಗಳ ವಿವರಗಳನ್ನು ಪಟ್ಟಿ ಮಾಡಿ ಕಂದಾಯ ಅದಾಲತ್ ನಡೆಸುವ ಸ್ಥಳದಲ್ಲಿ ಪ್ರಕಟಿಸಬೇಕು. ಈ ಕುರಿತು ಸಾರ್ವಜನಿಕರು ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಕಂದಾಯ ಅದಾಲತ್‌ನಲ್ಲಿ ಸಲ್ಲಿಸಲು ತಿಳಿಸಬೇಕು.

13. ಕಂದಾಯ ಅದಾಲತ್ ಸಮಯದಲ್ಲಿ ಧ್ವನಿವರ್ಧಕದ ಮುಖಾಂತರ ಅರ್ಜಿದಾರರ ಹೆಸರನ್ನು ಮತ್ತು ಪ್ರಕರಣದ ವಿವರಗಳನ್ನು ಸಾರ್ವಜನಿಕರಿಗೆ ತಿಳಿಸಿ, ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಪ್ರಕಟಿಸಬೇಕು.

14. ಆಕ್ಷೇಪಣೆಗಳು ಬಂದರೆ ಕಂದಾಯ ಅದಾಲತ್ ಅಧಿಕಾರಿಯು ಸಂಕ್ಷಿಪ್ತ ವಿಚಾರಣೆ ನಡೆಸಿ ಸೂಕ್ತ ಆದೇಶ ಹೊರಡಿಸುವುದು.

15. ಆದೇಶಗಳನ್ನು ಪೂರ್ವ ಮುದ್ರಿತ ನಮೂನೆಯಲ್ಲಿ ಸಿದ್ಧಪಡಿಸಿ ಮತ್ತು ಪೂರಕ ದಾಖಲೆಗಳೊಂದಿಗೆ ಕಡತದಲ್ಲಿ ಸಿದ್ಧಪಡಿಸಬೇಕು.

16. ವಾರಸುದಾರರಿಗೆ ನೀಡಿರುವ ನೋಟೀಸು ಮತ್ತು ವಂಶವೃಕ್ಷವನ್ನು ಕಡತದಲ್ಲಿ ಏಳು ದಿನಗಳ ಮುಂಚಿತವಾಗಿ ಸೇರಿಸಿಟ್ಟುಕೊಳ್ಳಬೇಕು.

17. ಸಿದ್ಧಪಡಿಸಿದ ಕಡತಗಳನ್ನು ಕಂದಾಯ ಅದಾಲತ್ ನಡೆಯುವ ದಿವಸ ಕಂದಾಯ ಅದಾಲತ್ ಅಧಿಕಾರಿಗೆ ತಿದ್ದುಪಡಿ ಆದೇಶಕ್ಕಾಗಿ ಮಂಡಿಸುವುದು.

18. ಆದೇಶ ಪಡೆದ ನಂತರ ಕಡತವನ್ನು ಮ್ಯುಟೇಷನ್ ಪ್ರಕ್ರಿಯೆಯನ್ನು ಪ್ರಾರಂಭಿಸಲು ಭೂಮಿ ಕೇಂದ್ರಕ್ಕೆ ರವಾನಿಸುವುದು.

19. ಮ್ಯುಟೇಷನ್ ಆದ ನಂತರ ಕಡತವನ್ನು ಅಭಿಲೇಖಾಲಯದಲ್ಲಿ ಸುರಕ್ಷಿತವಾಗಿ ಸಂರಕ್ಷಿಸುವುದು.

ಸುತ್ತೋಲೆ ಸಂಖ್ಯೆ: ಆರ್‌ಡಿ 44 ಎಂಆರ್‌ಆರ್ 2014.

**ಎಂ. ತಿಪ್ಪೀರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ

**ಅನುಬಂಧ–3**

**(ಪೋಡಿಯಾದರೂ ಪಹಣಿಯಲ್ಲಿ ಇಂಡೀಕರಣವಾಗದೇ ಇರುವ ಪ್ರಕರಣಗಳು)**

1. ಕಛೇರಿಯಲ್ಲಿ ನಮೂನೆ (1)ಅನ್ನು ಭರ್ತಿ ಮಾಡಿದ ಮತ್ತು ರೈತರಿಂದ ಅರ್ಜಿಯನ್ನು ಸ್ವೀಕರಿಸಿದ ನಂತರ ಸದರಿ ಪ್ರಕರಣಗಳ ಪಟ್ಟಿ ಮಾಡುವುದು.

2. ಸದರಿ ಪ್ರಕರಣಗಳಲ್ಲಿ ಅವಶ್ಯಕ ದಾಖಲೆಗಳಾದ ಸರ್ವೆ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ತಿದ್ದುಪಡಿ ಅವಶ್ಯವೆಂದು ಖಾತರಿ ಪಡಿಸಿಕೊಂಡು ತಿದ್ದುಪಡಿ ಕ್ರಮ ಅನುಸರಿಸುವುದು

3. ಪ್ರತಿಯೊಂದು ತಿದ್ದುಪಡಿ ಪ್ರಕರಣಕ್ಕೂ ಪ್ರತ್ಯೇಕ ಕಡತ ನಿರ್ವಹಿಸುವುದು. ಕಡತ ಕವಚದ ಮೇಲೆ ಕಂದಾಯ ಅದಾಲತ್ ಶೀರ್ಷಿಕೆಯಡಿ 1) ಕಡತದ ಸಂಖ್ಯೆ, 2) ಕಡತ ಪ್ರಾರಂಭಿಸಿದ ದಿನಾಂಕ, 3) ಸಂಕ್ಷಿಪ್ತ ವಿಷಯ, 4) ತಾಲ್ಲೂಕಿನ ಹೆಸರು, 5) ಹೋಬಳಿಯ ಹೆಸರು, 6) ಗ್ರಾಮದ ಹೆಸರು, 7) ಸರ್ವೆ ನಂಬರ್ ಈ ಅಂಶಗಳುಳ್ಳ ನಮೂನೆಯ ಪ್ರತಿಗಳನ್ನು ಮುದ್ರಿಸಿಟ್ಟುಕೊಳ್ಳಬೇಕು.

4. ತಿದ್ದುಪಡಿ ಪ್ರಕರಣಗಳಿಗೆ ಸುತ್ತೋಲೆ ರೀತ್ಯ ತೀರ್ಮಾನ ತೆಗೆದುಕೊಳ್ಳಬೇಕು.

5. ತಿದ್ದುಪಡಿ ಪ್ರಕರಣಗಳಿಗೆ ಸಂಬಂಧಿಸಿದಂತೆ, ಸಂಬಂಧಿತ ಎಲ್ಲಾ ಅಧಿಕಾರಿ/ನೌಕರರ ಟಿಪ್ಪಣಿ ಪೂರ್ಣಗೊಂಡು ಕಂದಾಯ ಅದಾಲತ್ ಅಧಿಕಾರಿಗಳು ಆದೇಶ ಹೊರಡಿಸಲು ಮಾತ್ರ ಬಾಕಿ ಇರುವಂತೆ ಸಿದ್ಧಪಡಿಸಬೇಕು.

6. ಸದರಿ ಪ್ರಕರಣಗಳಲ್ಲಿ ಸಂಬಂಧಪಟ್ಟ ಸರ್ವೆ ಸೂಪರ್‌ವೈಸರ್/ಎಡಿಎಲ್‌ಆರ್‌ರವರು ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ ಪೋಡಿಯಾದರೂ ಪಹಣಿಯಲ್ಲಿ ಇಂಡೀಕರಣವಾಗದಿರುವ ಬಗ್ಗೆ ಕಡ್ಡಾಯವಾಗಿ ದೃಢೀಕರಿಸಬೇಕು.

7. ಈಗಾಗಲೇ ಕಛೇರಿಗೆ ಸಲ್ಲಿಸಲಾಗಿರುವ ತಿದ್ದುಪಡಿ ಅರ್ಜಿಗಳನ್ನು ಸಹ ಅದಾಲತ್‌ನಲ್ಲಿ ಸ್ವೀಕೃತವಾಗುವ ಅರ್ಜಿಗಳೊಂದಿಗೆ ಸೇರಿಸಿಕೊಳ್ಳಬೇಕು.

8. ಆದೇಶಗಳನ್ನು ಪೂರ್ವ ಮುದ್ರಿತ ನಮೂನೆಯಲ್ಲಿ ಸಿದ್ಧಪಡಿಸಿ ಮತ್ತು ಪೂರಕ ದಾಖಲೆಗಳೊಂದಿಗೆ ಕಡತದಲ್ಲಿ ಸಿದ್ಧಪಡಿಸಬೇಕು.

9. ದಾಖಲಾತಿಗಳ ಪರಿಶೀಲನೆ ಮತ್ತು ತಿದ್ದುಪಡಿಗೆ ಕಡತಗಳನ್ನು ಕಂದಾಯ ಅದಾಲತ್ ದಿನಾಂಕದ ಒಂದು ವಾರ ಮುಂಚಿತವಾಗಿಯೇ ಸಿದ್ಧಪಡಿಸಿಕೊಳ್ಳುವುದು.

10. ತಿದ್ದುಪಡಿಯಿಂದ ಬಾಧಿತರಾಗಿರುವವರಿಗೆ ನೀಡಿರುವ ನೋಟೀಸ್ ಅನ್ನು ಕಡತದಲ್ಲಿ ಸೇರಿಸಿಟ್ಟುಕೊಳ್ಳಬೇಕು.

11. ಸಿದ್ಧಪಡಿಸಿದ ಕಡತಗಳನ್ನು ಕಂದಾಯ ಅದಾಲತ್ ನಡೆಯುವ ದಿವಸ ಕಂದಾಯ ಅದಾಲತ್ ಅಧಿಕಾರಿಗೆ ತಿದ್ದುಪಡಿ ಆದೇಶಕ್ಕಾಗಿ ಮಂಡಿಸುವುದು.

12. ತಿದ್ದುಪಡಿ ಪ್ರಕರಣಗಳ ವಿವರಗಳನ್ನು ಪಟ್ಟಿ ಮಾಡಿ ಕಂದಾಯ ಅದಾಲತ್ ನಡೆಸುವ ಸ್ಥಳದಲ್ಲಿ ಪ್ರಕಟಿಸಬೇಕು. ಈ ಕುರಿತು ಸಾರ್ವಜನಿಕ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಕಂದಾಯ ಅದಾಲತ್‌ನಲ್ಲಿ ಸಲ್ಲಿಸಲು ತಿಳಿಸಬೇಕು.

13. ಕಂದಾಯ ಅದಾಲತ್ ಸಮಯದಲ್ಲಿ ಧ್ವನಿವರ್ಧಕ ಮುಖಾಂತರ ಅರ್ಜಿದಾರರ ಹೆಸರನ್ನು ಮತ್ತು ಪ್ರಕರಣದ ವಿವರಗಳನ್ನು ಸಾರ್ವಜನಿಕರಿಗೆ ತಿಳಿಸಿ, ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಪ್ರಕಟಿಸಬೇಕು.

14. ಆಕ್ಷೇಪಣೆಗಳು ಬಂದರೆ ಕಂದಾಯ ಅದಾಲತ್ ಅಧಿಕಾರಿಯು ಸಂಕ್ಷಿಪ್ತ ವಿಚಾರಣೆ ನಡೆಸಿ ಸೂಕ್ತ ಆದೇಶ ಹೊರಡಿಸುವುದು.

15. ಆದೇಶ ಪಡೆದ ನಂತರ ಕಡತವನ್ನು ಮ್ಯುಟೇಷನ್ ಪ್ರಕ್ರಿಯೆಯನ್ನು ಪ್ರಾರಂಭಿಸಲು ಭೂಮಿ ಕೇಂದ್ರಕ್ಕೆ ರವಾನಿಸುವುದು.

16. ಮ್ಯುಟೇಷನ್ ಆದ ನಂತರ ಕಡತವನ್ನು ಅಭಿಲೇಖಾಲಯದಲ್ಲಿ ಸುರಕ್ಷಿತವಾಗಿ ಸಂರಕ್ಷಿಸುವುದು.

ಸುತ್ತೋಲೆ ಸಂಖ್ಯೆ: ಆರ್‌ಡಿ 44 ಎಂಆರ್‌ಆರ್ 2014.

**ಎಂ. ತಿಪ್ಪೀರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ

## ನಮೂನೆ (1)

### ______________ ತಾಲ್ಲೂಕು ವ್ಯಾಪ್ತಿಯ ಕಂದಾಯ ಅದಾಲತ್ ______________

### ಕಾಲಂ 3 ಮತ್ತು 9 ರಲ್ಲಿ ವಿಸ್ತೀರ್ಣ ಹೊಂದಾಣಿಕೆ ಇಲ್ಲದ ಸರ್ವೆ ನಂಬರಿನ ವಿವರ

ಗ್ರಾಮ : ______________

ಹೋಬಳಿ : ______________

ತಾಲ್ಲೂಕು : ______________

| ಕ್ರ.ಸಂ. | ಪಹಣಿ ಕಾಲಂ ನಂ. | ಪಹಣಿಯಲ್ಲಿ ಈಗ ಇರುವ ನಮೂದು | | | | | | | | | ತಿದ್ದುಪಡಿ ಮಾಡಿ ಆದೇಶಿಸಿರುವ ನಮೂದು | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | ಸ.ನಂ. | ಹಿಸ್ಸಾ ನಂ. | ಒಟ್ಟು ವಿಸ್ತೀರ್ಣ | ಅ ಖರಾಬ್ | ಬ ಖರಾಬ್ | ನಿವ್ವಳ ವಿಸ್ತೀರ್ಣ | ಆಕಾರ | ಖಾತೆದಾರರ ಹೆಸರು | ವಿಸ್ತೀರ್ಣ | ಸ.ನಂ. | ಹಿಸ್ಸಾ ನಂ. | ಒಟ್ಟು ವಿಸ್ತೀರ್ಣ | ಅ ಖರಾಬ್ | ಬ ಖರಾಬ್ | ನಿವ್ವಳ ವಿಸ್ತೀರ್ಣ | ಆಕಾರ | ಖಾತೆದಾರರ ಹೆಸರು | ವಿಸ್ತೀರ್ಣ | ಷರಾ |
| | | | | | | | | | | | | | | | | | | | | |
| | | | | | | | | | | | | | | | | | | | | |

## ನಮೂನೆ (2)

### ಆಕಾರ್ ಬಂದ್ ಪ್ರಕಾರ ತಿದ್ದುಪಡಿ

| ಕ್ರ.ಸಂ. | ಪಹಣಿ ಕಾಲಂ ನಂ. | ಅಕಾರ್ ಬಂದ್ ಪ್ರಕಾರ | | | | | | | ಪಹಣಿಯಂತೆ ಇವರ ವಿಸ್ತೀರ್ಣ | | | | | | | ಹಾಲಿ ಪಹಣಿಯಲ್ಲಿ ತಿದ್ದುಪಡಿ | | | | | | | ಷರಾ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಸ.ನಂ. | ಹಿಸ್ಸಾ ನಂ. | ಒಟ್ಟು ವಿಸ್ತೀರ್ಣ | ಅ ಖರಾಬ್ | ಬ ಖರಾಬ್ | ನಿವ್ವಳ ವಿಸ್ತೀರ್ಣ | ಆಕಾರ | ಸ.ನಂ. | ಹಿಸ್ಸಾ ನಂ. | ಒಟ್ಟು ವಿಸ್ತೀರ್ಣ | ಅ ಖರಾಬ್ | ಬ ಖರಾಬ್ | ನಿವ್ವಳ ವಿಸ್ತೀರ್ಣ | ಆಕಾರ | ಸ.ನಂ. | ಹಿಸ್ಸಾ ನಂ. | ಒಟ್ಟು ವಿಸ್ತೀರ್ಣ | ಅ ಖರಾಬ್ | ಬ ಖರಾಬ್ | ನಿವ್ವಳ ವಿಸ್ತೀರ್ಣ | ಆಕಾರ | |
| | | | | | | | | | | | | | | | | | | | | | | | |
| | | | | | | | | | | | | | | | | | | | | | | | |

**ಎಂ. ತಿಪ್ಪೀರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ

**PR 636**
**SC 100**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರ ಇಲಾಖೆಯಾದ "ವಾರ್ತಾ ಇಲಾಖೆ"ಯ ಹೆಸರನ್ನು "ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ" ಎಂದು ಮರು ನಾಮಕರಣ ಮಾಡಿರುವ ಬಗ್ಗೆ–ಕೆಲಸ/ವಿಷಯಗಳ ಬಗ್ಗೆ ಮಾರ್ಗಸೂಚಿ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಸಂವಾ 38 ವಾಪ್ರಸಿ 2014 (ಭಾಗ), ದಿನಾಂಕ: 08–07–2014
2. ನಿರ್ದೇಶಕರು, ವಾರ್ತಾ ಇಲಾಖೆ ಇವರ ಪತ್ರ ಸಂಖ್ಯೆ: ವಾಇ/ಇಎಸ್‌ಟಿ/ಇ8/8/2014–15, ದಿನಾಂಕ: 14–07–2014

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರ ಇಲಾಖೆಯಾದ "ವಾರ್ತಾ ಇಲಾಖೆ"ಯ ಹೆಸರನ್ನು "ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ" ಎಂದು ಮರು ನಾಮಕರಣ ಮಾಡಲಾಗಿರುತ್ತದೆ.

ಮರು ನಾಮಕರಣಗೊಂಡಿರುವ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಗೆ ಕೆಲಸ/ವಿಷಯಗಳ ಬಗ್ಗೆ ಪರಿಶೀಲಿಸಿ ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾ/38/ವಾಪ್ರಸಿ/2014 (ಭಾಗ), ಬೆಂಗಳೂರು, ದಿನಾಂಕ: 14ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ **"ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ"** ಎಂದು ಮರುನಾಮಕರಣಗೊಂಡಿರುವ ಇಲಾಖೆಗೆ ಈ ಕೆಳಕಂಡ ಕೆಲಸ/ವಿಷಯಗಳನ್ನು ನಿರ್ವಹಿಸಲು ಆದೇಶಿಸಿದೆ.

1) ಸಾರ್ವಜನಿಕ ಸಂಪರ್ಕ ಕಾರ್ಯ ನಿರ್ವಹಣೆಗಾಗಿ ಇಲಾಖೆಯಲ್ಲಿ ಒಂದು ಪ್ರತ್ಯೇಕ ವ್ಯವಸ್ಥೆಯನ್ನು ರೂಪಿಸುವುದು.
2) ಈ ವ್ಯವಸ್ಥೆಯ ಮೂಲಕ ಸರ್ಕಾರದ ಯೋಜನೆಗಳಿಗೆ ಸಂಬಂಧಿಸಿದಂತೆ ರಾಜ್ಯಾದ್ಯಂತ ಎಲ್ಲಾ ಇಲಾಖೆಗಳಿಂದ ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಿ ಸಾರ್ವಜನಿಕರಿಗೆ ವಿತರಿಸುವುದು.
3) ಸಾರ್ವಜನಿಕರು ಸರ್ಕಾರಕ್ಕೆ ಸಲ್ಲಿಸುವ ಮನವಿ, ದೂರು ಹಾಗೂ ಸಲಹೆಗಳನ್ನು, ಸಂಬಂಧಿಸಿದ ಇಲಾಖೆಗಳಿಗೆ ತಲುಪಿಸುವುದು.
4) ವಿವಿಧ ಸಮೂಹ ಮಾಧ್ಯಮಗಳಲ್ಲಿ ಪ್ರಕಟವಾಗುವ ಮತ್ತು ಪ್ರಸಾರವಾಗುವ ಸಾರ್ವಜನಿಕರ ಕುಂದು ಕೊರತೆಗಳು, ಟೀಕೆ–ಟಿಪ್ಪಣಿಗಳು, ಸಲಹೆ ಮಾರ್ಗದರ್ಶನಗಳನ್ನು ಸಂಗ್ರಹಿಸಿ ಸಂಬಂಧಿಸಿದ ಇಲಾಖೆಗಳಿಗೆ ಕಳುಹಿಸುವುದು ಹಾಗೂ ಈ ಬಗ್ಗೆ ಇಲಾಖೆಯು ಕೈಗೊಂಡಿರುವ ಅನುಸರಣಾ ಕ್ರಮದ ಬಗ್ಗೆ ಸಾರ್ವಜನಿಕರಿಗೆ ತಿಳಿಯಪಡಿಸುವುದು.

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯು ಒಟ್ಟಾರೆಯಾಗಿ ಸರ್ಕಾರ ಮತ್ತು ಸಾರ್ವಜನಿಕರ ನಡುವೆ ಸಂಪರ್ಕ ಸೇತುವೆಯಂತೆ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ಈ ಆದೇಶವನ್ನು ಸಿಆಸು ಇಲಾಖೆಯ ಅ.ಟಿ. ಸಂಖ್ಯೆ : ಸಿಆಸುಇ/11/ಎಆರ್‌ಬಿ/2014, ದಿನಾಂಕ: 07–07–2014ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR 632

**ಸಿ. ಮಂಜುಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ವಾರ್ತಾ ಶಾಖೆ)

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರ ಇಲಾಖೆಯಾದ **"ವಾರ್ತಾ ಇಲಾಖೆ"ಯ** ಹೆಸರನ್ನು **"ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ"** ಎಂದು ಮರು ನಾಮಕರಣ ಮಾಡುವ ಬಗ್ಗೆ

**ಓದಲಾಗಿದೆ :** ನಿರ್ದೇಶಕರು, ವಾರ್ತಾ ಇಲಾಖೆ ಇವರ ಏಕ ಕಡತ ಸಂಖ್ಯೆ:ವಾಇ/ಇಎಸ್‌ಟಿ/ಇ8/8/2014–15, ದಿನಾಂಕ: ------------

**ಪ್ರಸ್ತಾವನೆ:**

ದಿನಾಂಕ: 31–05–2014ರ ಮಾನ್ಯ ಮೂಲ ಸೌಕರ್ಯ ಅಭಿವೃದ್ಧಿ, ವಾರ್ತಾ ಮತ್ತು ಹಜ್ ಸಚಿವರ ಪತ್ರದಲ್ಲಿ ವಾರ್ತಾ ಇಲಾಖೆಯನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಎಂದು ಮರುನಾಮಕರಣ ಮಾಡುವ ಕುರಿತಂತೆ ದೇಶದ ವಿವಿಧ ರಾಜ್ಯಗಳಲ್ಲಿ ವಾರ್ತಾ ಇಲಾಖೆಯನ್ನು ನಾಮೀಕರಿಸಿರುವ ವಿವರಗಳು ಹಾಗೂ ಕಾರ್ಯಚಟುವಟಿಕೆಗಳ ಬಗ್ಗೆ ವಿಶ್ಲೇಷಣೆ ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಲು ಕೋರಿರುತ್ತಾರೆಂದು ತಿಳಿಸುತ್ತಾ, ಕೇರಳ, ಆಂಧ್ರಪ್ರದೇಶ, ಮೇಘಾಲಯ, ಪಂಜಾಬ್, ಚಂಡಿಗಡ, ಛತ್ತೀಸ್‌ಗಡ, ಬಿಹಾರ, ರಾಜಸ್ತಾನ, ಜಮ್ಮು ಮತ್ತು ಕಾಶ್ಮೀರ, ಅರುಣಾಚಲಪ್ರದೇಶ, ಉತ್ತರಾಖಾಂಡ್, ಒಡಿಸ್ಸಾ, ಹಿಮಾಚಲಪ್ರದೇಶ, ಜಾರ್ಖಂಡ್, ಮಧ್ಯಪ್ರದೇಶ, ಅಸ್ಸಾಂ, ಮಣಿಪುರ ಹಾಗೂ ಸಿಕ್ಕಿಂ ರಾಜ್ಯಗಳಲ್ಲಿ ವಾರ್ತಾ ಇಲಾಖೆಯನ್ನು 'ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ' ಎಂಬ ಹೆಸರಿನಡಿ ಪತ್ರಿಕೆ/ಪತ್ರಕರ್ತರು, ಮಾಹಿತಿ/ಪ್ರಚಾರ ನೀಡುವ ಚಟುವಟಿಕೆಗಳನ್ನು ಕೈಗೊಂಡಿದೆ. ಇದರೊಂದಿಗೆ

ಶಿಷ್ಟಾಚಾರ ಹಾಗೂ ಆತಿಥ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮೂಲಕವೇ ನಡೆಯುತ್ತಿದೆ ಎಂದು ತಿಳಿಸಿರುತ್ತಾರೆ.

2. ಮುಂದುವರಿದು, ಪತ್ರಿಕಾ ಚಟುವಟಿಕೆಗಳೊಂದಿಗೆ ಶಿಷ್ಟಾಚಾರ ಹಾಗೂ ಆತಿಥ್ಯಕ್ಕೆ ಸಂಬಂಧಿಸಿದ (Protocol and Hospitality) ಕಾರ್ಯಭಾರವನ್ನು ವಾರ್ತಾ ಇಲಾಖೆಯ ಮೂಲಕ ಕೈಗೊಂಡರೆ, ಎಲ್ಲಾ ರಾಜ್ಯಗಳ ಮಾದರಿಯಲ್ಲೇ ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯು ಇನ್ನಷ್ಟು ಸಮರ್ಥವಾಗಿ ಹಾಗೂ ಯಶಸ್ವಿಯಾಗಿ ಕಾರ್ಯನಿರ್ವಹಿಸಬಹುದಾಗಿದೆ ಎಂದೂ, ಪ್ರಸ್ತುತ ವಾರ್ತಾ ಇಲಾಖೆ ಮಾಹಿತಿ ನೀಡುವ ಕಾರ್ಯ ಮಾತ್ರ ಮಾಡುತ್ತಿದೆ. ಇದು ಸೀಮಿತ ಪರಿಧಿಯ ಕಾರ್ಯ. ಸರ್ಕಾರದ ಬಗೆಗೆ ಇದರಿಂದ ಸಂಪೂರ್ಣ ಅರಿವು ಮೂಡಿಸಲು ಸಾಧ್ಯವಾಗುತ್ತಿಲ್ಲ. ಸಾರ್ವಜನಿಕ ಸಂಪರ್ಕವನ್ನು ಇಲಾಖೆಯ ವ್ಯಾಪ್ತಿಗೆ ತಂದಾಗ ಇಲಾಖೆ ಇನ್ನಷ್ಟು ಪರಿಣಾಮಕಾರಿಯಾಗಿ ಸುಸಂಬದ್ಧವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆಂದು ತಿಳಿಸುತ್ತಾ ಇತರ ರಾಜ್ಯಗಳ ಮಾದರಿಯಲ್ಲಿ ಶಿಷ್ಟಾಚಾರ ಮತ್ತು ಆತಿಥ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ವಾರ್ತಾ ಇಲಾಖೆಗೆ ಹಸ್ತಾಂತರಿಸಬಹುದಾಗಿದೆ. ಹಾಗೂ ವಾರ್ತಾ ಇಲಾಖೆಯನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಎಂದು ಮರುನಾಮಕರಣ ಮಾಡಲು ಸರ್ಕಾರದ ಅನುಮೋದನೆ ನೀಡುವಂತೆ ಮೇಲೆ ಓದಲಾದ ಏಕ ಕಡತದಲ್ಲಿ ನಿರ್ದೇಶಕರು, ವಾರ್ತಾ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾ/38/ವಾಪ್ರಸಿ/2014 (ಭಾಗ), ಬೆಂಗಳೂರು, ದಿನಾಂಕ: 8ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರೀಯ ಇಲಾಖೆಯಾದ ವಾರ್ತಾ ಇಲಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ **"ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ"** ಎಂದು ಮರುನಾಮಕರಣ ಮಾಡಿ ಆದೇಶಿಸಿದೆ.

ಈ ಇಲಾಖೆಗೆ ವಹಿಸಲಾಗುವ ವಿಷಯ ಹಾಗೂ ಕೆಲಸಗಳ ಬಗ್ಗೆ ಪ್ರತ್ಯೇಕವಾಗಿ ಮಾರ್ಗಸೂಚಿಯನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR 633**

**ಸಿ. ಮಂಜುಳ,**
ಸರ್ಕಾರದ ಅಧೀನ ಕಾರ್ಯದರ್ಶಿ (ವಾರ್ತೆ),
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಕಸಂವಾಪ್ರ/38/ವಾಪ್ರಸಿ/2014 (ಭಾಗ), ಬೆಂಗಳೂರು, ದಿನಾಂಕ: 14ನೇ ಜುಲೈ, 2014**

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 38 ವಾಪ್ರಸಿ 2014 (ಭಾಗ), ದಿನಾಂಕ: 08–07–2014ರ ಪ್ರಸ್ತಾವನೆಯ ಕಂಡಿಕೆ (2) ರಲ್ಲಿನ **"ಮುಂದುವರಿದು ಪತ್ರಿಕಾ ಚಟುವಟಿಕೆಗಳೊಂದಿಗೆ ಶಿಷ್ಟಾಚಾರ ಹಾಗೂ ಆತಿಥ್ಯಕ್ಕೆ ಸಂಬಂಧಿಸಿದ (Protocol and Hospitality) ಕಾರ್ಯಭಾರವನ್ನು ವಾರ್ತಾ ಇಲಾಖೆಯ ಮೂಲಕ ಕೈಗೊಂಡರೆ"** ಎಂಬುದನ್ನು ಹಾಗೂ ಸದರಿ ಕಂಡಿಕೆಗಳಲ್ಲಿನ **"ಇತರ ರಾಜ್ಯಗಳ ಮಾದರಿಯಲ್ಲಿ ಶಿಷ್ಟಾಚಾರ ಮತ್ತು ಆತಿಥ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ವಾರ್ತಾ ಇಲಾಖೆಗೆ ಹಸ್ತಾಂತರಿಸಬಹುದಾಗಿದೆ ಹಾಗೂ"** ಎಂಬುದನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR 634**

**ಸಿ. ಮಂಜುಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ವಾರ್ತಾ ಶಾಖೆ)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಬೆರಟೇನ ಅಗ್ರಹಾರ ಗ್ರಾಮದ ಸ.ನಂ. 39ರ ಸರ್ಕಾರಿ ಜಮೀನಿನಲ್ಲಿ 0–20 ಗುಂಟೆ ಜಮೀನನ್ನು ಪರಪ್ಪನ ಅಗ್ರಹಾರ ಪೋಲೀಸ್ ಠಾಣೆಗೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಎಸ್) ಸಿಆರ್ 76/2010–11, ದಿನಾಂಕ: 19–03–2014
2. ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/531/07–08, ದಿನಾಂಕ: 22–01–2014

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಬೆರಟೇನ ಅಗ್ರಹಾರ ಗ್ರಾಮದ ಸ.ನಂ. 39ರ ಸರ್ಕಾರಿ ಗುಂಡುತೋಪು ಜಮೀನಿನಲ್ಲಿ 0–20 ಗುಂಟೆ ಜಮೀನನ್ನು ಪರಪ್ಪನ ಅಗ್ರಹಾರ ಪೋಲೀಸ್ ಠಾಣೆಗೆ

ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ಸಂಖ್ಯೆ: ಎಲ್‌ಎನ್‌ಡಿಸಿಆರ್ 531/07–08ರಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 68(1)ರಡಿ ಅಧಿಸೂಚನೆ ಹೊರಡಿಸಿದ್ದು, 90 ದಿನಗಳ ಒಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲವೆಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸದರಿ ಜಮೀನಿನಲ್ಲಿ ಯಾವುದೇ ಗಿಡಮರಗಳು ಇರದೇ ಖುಲ್ಲಾ ಇರುತ್ತದೆ ಹಾಗೂ ಗುಂಡುತೋಪಿನ ಅಸ್ತಿತ್ವವನ್ನು ಕಳೆದುಕೊಂಡಿದ್ದು, ಇದರಿಂದ ಸುತ್ತಮುತ್ತಲಿನ ಪರಿಸರಕ್ಕೆ ಯಾವುದೇ ತೊಂದರೆಯಾಗುವುದಿಲ್ಲವೆಂದು ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ರವರು ವರದಿ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 170 ಎಲ್‌ಜಿಬಿ 2014, ಬೆಂಗಳೂರು, ದಿನಾಂಕ: 21ನೇ ಜುಲೈ, 2014**

ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಬೆರಟೇನ ಅಗ್ರಹಾರ ಗ್ರಾಮದ ಸ.ನಂ. 39ರ ಸರ್ಕಾರಿ ಜಮೀನಿನಲ್ಲಿ 0–20 ಗುಂಟೆ ಜಮೀನನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪರಪ್ಪನ ಅಗ್ರಹಾರ ಪೊಲೀಸ್ ಠಾಣೆಗೆ ಮಂಜೂರು ಮಾಡಿದೆ.

**ಷರತ್ತುಗಳು:**

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–1).

**P.R. 635**
**SC 25**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಉಮಾಕಾಂತ್ ಆರ್. ಪಾಟೀಲ್, ಸಹಾಯಕ ಔಷಧ ನಿಯಂತ್ರಕರು, ಇವರು ಈ ಹಿಂದೆ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಪಿಂಚಣಿ ಉದ್ದೇಶಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ –ಆದೇಶ.

**ಓದಲಾಗಿದೆ:** 1) ಔಷಧ ನಿಯಂತ್ರಕರ ಪತ್ರ ಸಂಖ್ಯೆ: ಔನಿಇ/509/ಸಿಬ್ಬಂದಿ/2013–14 ದಿನಾಂಕ: 15.10.13, 11.11.2013,07.03.2014 26–03–2014 ಹಾಗೂ 16.06.2014.

2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ/1/ಎಸ್‌ಆರ್‌ಎ/11, ದಿನಾಂಕ: 5.3.11.

**ಪ್ರಸ್ತಾವನೆ:**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿನ ತಮ್ಮ ಪತ್ರದಲ್ಲಿ ಶ್ರೀ ಉಮಾಕಾಂತ್ ಆರ್.ಪಾಟೀಲ್, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಇವರು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ/ಆಸೇಸಿ/406/ಆಸೇಸಿ/90 ದಿನಾಂಕ: 13.5.93ರನ್ವಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಿನಾಂಕ:26.5.93 ರಿಂದ "ಪದವೀಧರ ಫಾರ್ಮಾಸಿಸ್ಟ್" ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸೂಕ್ತ ದ್ವಾರದ ಮೂಲಕ ಔಷಧ ನಿಯಂತ್ರಣ ಇಲಾಖೆಯಲ್ಲಿನ ಔಷಧ ಪರಿವೀಕ್ಷಕರ ಹುದ್ದೆಗೆ (ಗ್ರೂಪ್–ಬಿ) (ವೇ.ಶ್ರೇ.ರೂ: 6000–11200) ಆಯ್ಕೆಗೊಂಡು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ/100/ಐಎಂಎಂ/99(2) ದಿನಾಂಕ: 8.10.99ರನ್ವಯ ಔಷಧ ಪರಿವೀಕ್ಷಕರ ಹುದ್ದೆಗೆ ನೇಮಕಾತಿ ಹೊಂದಿದ್ದು, ದಿನಾಂಕ:25.10.99ರ ಪೂರ್ವಾಹ್ನ ಔಷಧ ನಿಯಂತ್ರಣ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿದ್ದಾರೆ, ಸದರಿ ಅಧಿಕಾರಿಯವರು ದಿನಾಂಕ:26.5.93 ರಿಂದ ದಿನಾಂಕ:25.6.99ರವರೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಪಿಂಚಣಿ ಉದ್ದೇಶಕ್ಕಾಗಿ ಅವಧಿಯನ್ನು ಅರ್ಹತಾದಾಯಕ ಸೇವೆ ಎಂದು ಪರಿಗಣಿಸುವಂತೆ ಕೋರಿರುತ್ತಾರೆ

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224–ಎರಡಿಯಲ್ಲಿ ಸರ್ಕಾರಿ ನೌಕರರು ಹಿಂದೆ ಸಲ್ಲಿಸಿರುವ ಸರ್ಕಾರಿ ಸೇವೆಯನ್ನು ಪಿಂಚಣಿ ಉದ್ದೇಶಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ ಪರಿಶೀಲಿಸಲಾಗಿ, ಉಲ್ಲೇಖ (2)ರ ಸರ್ಕಾರಿ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳು ಈ ಪ್ರಕರಣದಲ್ಲಿ ಪೂರೈಸಿರುವುದರಿಂದಲೂ ಹಾಗೂ ಮಹಾಲೇಖಪಾಲರು ತಮ್ಮ ಪತ್ರ ಸಂಖ್ಯೆ: GE-2 PI Vol.TUW/2013-14/373 ದಿನಾಂಕ:06.03.2014ರಲ್ಲಿ ಶ್ರೀ ಉಮಾಕಾಂತ್ ಆರ್. ಪಾಟೀಲ್, ಪದವೀಧರ ಫಾರ್ಮಾಸಿಸ್ಟ್ ಹುದ್ದೆಯಲ್ಲಿನ ಸೇವಾವಧಿಯನ್ನು ದಿನಾಂಕ:26.5.93 ರಿಂದ ದಿನಾಂಕ:25.10.99ರ ವರೆಗೆ ದೃಢೀಕರಿಸಿರುವುದರಿಂದ ಶ್ರೀ ಉಮಾಕಾಂತ್ ಆರ್. ಪಾಟೀಲ್, ಇವರು ಈ ಹಿಂದೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಪಿಂಚಣಿ ಉದ್ದೇಶಕ್ಕಾಗಿ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 239 ಐಎಂಎಂ 2013, ಬೆಂಗಳೂರು, ದಿನಾಂಕ: 16.07.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 224–ಎರನ್ವಯ ಶ್ರೀ ಉಮಾಕಾಂತ್ ಆರ್ ಪಾಟೀಲ್, ಸಹಾಯಕ ಔಷಧ ನಿಯಂತ್ರಕರು, ಕೇಂದ್ರ ಕಛೇರಿ, ಬೆಂಗಳೂರು, ಇವರು ಈ ಹಿಂದೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ "ಪದವೀಧರ ಫಾರ್ಮಾಸಿಸ್ಟ್" ಹುದ್ದೆಯಲ್ಲಿ ದಿನಾಂಕ: 26.5.93 ರಿಂದ ಕರ್ತವ್ಯ ನಿರ್ವಹಿಸಿದ್ದು ಈ ಸಂದರ್ಭದಲ್ಲಿ ಸದರಿ ಅಧಿಕಾರಿಯವರ ಖಾಯಂಪೂರ್ವ ಸೇವಾವಧಿಯು ಘೋಷಣೆಯಾಗಿರುತ್ತದೆ. ತದನಂತರ ಔಷಧ ನಿಯಂತ್ರಣ ಇಲಾಖೆಯ ಔಷಧ ಪರಿವೀಕ್ಷಕರ ಹುದ್ದೆಗೆ ಸೂಕ್ತ ದ್ವಾರದ ಮೂಲಕ ಅರ್ಜಿ ಸಲ್ಲಿಸಿ ನೇಮಕಗೊಂಡು ದಿನಾಂಕ;25.10.1999ರಂದು ಕರ್ತವ್ಯಕ್ಕೆ ಹಾಜರಾಗಿದ್ದಾರೆ. ಅದರಂತೆ ಸದರಿ ಅಧಿಕಾರಿಯವರು ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ "ಪದವೀಧರ ಫಾರ್ಮಾಸಿಸ್ಟ್" ಹುದ್ದೆಯಲ್ಲಿ ದಿನಾಂಕ:26.5.93 ರಿಂದ ದಿನಾಂಕ:23.10.99ರವರೆಗೆ ಸಲ್ಲಿಸಿರುವ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1182 ಆಂಅಸ 2014, ದಿನಾಂಕ: 08.07.2014ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಭಾ.ವೈ.ಪ ಮತ್ತು ಸಮನ್ವಯ)

**P.R. 590**

## HEALTH AND FAMILY WELFARE SECRETARIAT

**Sub:** **NITTE and Yenepoya Deemed universities providing 25% of seats to the Government of Karnataka-reg.**

**READ:**
1. Government Letter No. HFW 142 MPS 2010 (P), dated: 27.04.2010.
2. Government Order No. HFW 60 MMC 2009, dated: 26.06.2010.

**PREAMBLE :**

The Government of Karnataka has given exemption to NITTE and Yenepoya Deemed Universities, Mangalore from reserving 25% of seats to the Government vide at reference (1) above.

Thereafter the Government of Karnataka has ordered that the Deemed universities in Karnataka, which are running Private Medical and Dental Colleges not consenting to provide 25% of Under Graduate and Post-Graduate seats to the Government, to allot seats to the meritorious students, such Deemed universities. Shall not be given approval for the increase of the seats or for starting of new courses and issuing EC&FC vide reference (2) above.

Therefore, the Government of Karnataka has decided to withdraw the letter No. HFW 142 MPS 2010(P), dated 27.04.2010 where the exemption to surrender 25% seats to the Government by NITTE and Yenepoya Deemed Universities of Mangalore was accorded. Hence this order.

**Government Order No. HFW 140 RGU 2014, Bangalore, Dated: 02.07.2014**

Government of Karnataka withdraws the letter No. HFW 142 MPS 2010(P), dated 27.04.2010 NITTE and Yenepoya Deemed Universities. Mangalore shall be subject to the order No. HFW 60 MMC 2009, dated:26.06.2010 and the conditions of EC&FC granted to them.

By Order and in the name of the Governor of Karnataka,

**K.S. JAGADISH REDDY,**

Under Secretary to Government-2 (I/c),

Health and Family Welfare Department.

(Medical Education)

**P.R. 591**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ನಿವೃತ್ತ ಪಶುವೈದ್ಯಾಧಿಕಾರಿಗಳ ಸಂಚಿತ ವೇತನ ಪುನರ್ ನಿಗದಿಪಡಿಸುವ ಬಗ್ಗೆ

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 96 ಪಸಸೇ 2012, ದಿನಾಂಕ: 16–11–2012
2. ಅಧ್ಯಕ್ಷರು, ಕರ್ನಾಟಕ ಪಶುವೈದ್ಯಕೀಯ ಸಂಘ (ನೋಂ), ಇವರ ಮನವಿ ದಿನಾಂಕ: 19–11–2012, 08–01–2013 & 19–11–2013
3. ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 56 ಪಸಸೇ 2011, ದಿನಾಂಕ: 29–12–2012

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 16–11–2012ರ ಸರ್ಕಾರದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ 66 ವರ್ಷ ವಯೋಮಿತಿಯ ಕೆಳಗಿರುವ 58 ನಿವೃತ್ತ ಪಶುವೈದ್ಯರನ್ನು ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಪ್ರತಿ ತಿಂಗಳಿಗೆ ರೂ. 13,000/– ಸಂಚಿತ ವೇತನದ ಮೇಲೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 15ರ ಅನುಸಾರ ಷರತ್ತುಗಳಿಗೊಳಪಟ್ಟು ಮರು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿತ್ತು.

ಅಧ್ಯಕ್ಷರು, ಕರ್ನಾಟಕ ಪಶುವೈದ್ಯಕೀಯ ಸಂಘ (ನೋಂ), ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಮನವಿಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 56 ಪಸಸೇ 2011, ದಿನಾಂಕ: 29–12–2012ರನ್ವಯ ಪಶುವೈದ್ಯಾಧಿಕಾರಿಗಳನ್ನು ಗ್ರೂಪ್–ಎ ದರ್ಜೆಗೇರಿಸಿದ್ದು, ಅವರ ವೇತನ ಶ್ರೇಣಿ ರೂ. 28,100–50,100/– ಆಗಿದ್ದು, ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ನಿವೃತ್ತ ಪಶುವೈದ್ಯಾಧಿಕಾರಿಗಳ ಸಂಚಿತ ವೇತನವನ್ನು ದಿನಾಂಕ: 01–04–2012 ರಿಂದ ಅನ್ವಯಿಸುವಂತೆ ರೂ. 26,000/– ಹಾಗೂ ದಿನಾಂಕ: 31–12–2012 ರಿಂದ ಅನ್ವಯವಾಗುವಂತೆ ರೂ. 28,100/– ಗಳಿಗೆ ನಿಗದಿಪಡಿಸುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ಇಲಾಖಾ ಪುನರ್ ದಿನಾಂಕ: 29–12–2012ರ ಇಲಾಖಾ ಪುನರ್ ರಚನೆಯನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪಶುವೈದ್ಯಾಧಿಕಾರಿಗಳು ಗ್ರೂಪ್–ಬಿ ವರ್ಗದ ವೇತನ ಶ್ರೇಣಿ ರೂ. 26,000–47,700 ನ್ನು ಪಡೆಯುತ್ತಿದ್ದು, ಪಶುವೈದ್ಯಾಧಿಕಾರಿಗಳ ವೃಂದದ ವೇತನ ಶ್ರೇಣಿಯನ್ನು ಗ್ರೂಪ್–ಎ ವರ್ಗದ ವೇತನ ಶ್ರೇಣಿ ರೂ. 28,100–50,100 ಗಳಿಗೆ ಪರಿಷ್ಕರಿಸಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಪರಿಶೀಲಿಸಿ, ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 96 ಪಸಸೇ 2012, ಬೆಂಗಳೂರು, ದಿನಾಂಕ: 8ನೇ ಜುಲೈ, 2014**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಈ ಹಿಂದೆ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ನಿವೃತ್ತ ಪಶುವೈದ್ಯಾಧಿಕಾರಿಗಳಿಗೆ, ಪಶುವೈದ್ಯಾಧಿಕಾರಿಗಳಿಗೆ ವೇತನ ಶ್ರೇಣಿಯ ಕನಿಷ್ಠ ವೇತನವನ್ನು ನಿಗದಿಪಡಿಸಿರುವ ಹಿನ್ನೆಲೆಯಲ್ಲಿ ಪ್ರಸ್ತುತದಲ್ಲಿಯೂ ಸಹ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನಿವೃತ್ತ ಪಶುವೈದ್ಯಾಧಿಕಾರಿಗಳಿಗೆ 2012ರ ಪರಿಷ್ಕೃತ ವೇತನ ಶ್ರೇಣಿಯನ್ವಯ ದಿನಾಂಕ: 01–04–2012 ರಿಂದ ಅನ್ವಯವಾಗುವಂತೆ ರೂ. 26,000/– ಗಳಿಗೆ (ಇಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ) ಹಾಗೂ ದಿನಾಂಕ: 31–12–2012ರಿಂದ ಅನ್ವಯವಾಗುವಂತೆ ರೂ. 28,100/–ಗಳಿಗೆ (ಇಪ್ಪತ್ತೆಂಟು ಸಾವಿರದ ಒಂದು ನೂರು ರೂಪಾಯಿಗಳು ಮಾತ್ರ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 319 ವೆಚ್ಚ–4/2012, ದಿನಾಂಕ: 23–05–2014ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಪ್ರಸನ್ನ,**

ಪೀಠಾಧಿಕಾರಿ–2,

ಪಶುಸಂಗೋಪನೆ & ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

**PR 631**
**SC 100**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಖಜಾನೆ ಇಲಾಖೆ ಇವರು ಹಿಂದೆ ಉಪ ಖಜಾನೆ ಹಿರೇಕೆರೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರ ಮೇಲಿನ ಲಂಚ ಸ್ವೀಕಾರ ಪ್ರಕರಣದಲ್ಲಿ ಆರೋಪ ಸಾಬೀತಾಗಿರುವ ಹಿನ್ನೆಲೆಯಲ್ಲಿ ಇವರ ಮಾಸಿಕ ನಿವೃತ್ತಿ ವೇತನವನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1) ಘನ ವಿಶೇಷ ನ್ಯಾಯಾಲಯ, ಹಾವೇರಿ ವಿಶೇಷ ಪ್ರಕರಣ ಸಂಖ್ಯೆ 4/2009ರಲ್ಲಿ ದಿನಾಂಕ:03-07-2013 ರಂದು ನೀಡಿದ ತೀರ್ಪು
2) ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್-57/ಸಿಆರ್-6/2008/ಹೆಚ್‌ವಿಆರ್ ದಿನಾಂಕ:21-09-2013.
3) ಶ್ರೀ ಬಿ.ಎಸ್. ಮುದಿಗೌಡರ ಅವರಿಗೆ ನೀಡಲಾದ ಕಾರಣ ಕೇಳುವ ನೋಟೀಸ್ ದಿನಾಂಕ:27-11-2013.
4) ಕಾರಣ ಕೇಳುವ ನೋಟೀಸ್‌ಗೆ ಶ್ರೀ ಬಿ.ಎಸ್. ಮುದಿಗೌಡರ, ಅವರು ನೀಡಿದ ಸಮಜಾಯಿಷಿ ದಿನಾಂಕ:08-01-2014.
5) ಪತ್ರ ಸಂಖ್ಯೆ ಪಿಎಸ್‌ಸಿ 43 ಸಿಎನ್‌ಎಸ್/4ಪಿಎಸ್‌ಸಿ ದಿನಾಂಕ:04-06-2014 ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರಿಂದ

**ಪ್ರಸ್ತಾವನೆ :**

ಶ್ರೀ ಬಿ.ಎಸ್. ಮುದಿಗೌಡರ, ನಿವೃತ್ತ, ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಅವರು ಈ ಹಿಂದೆ ಉಪ ಖಜಾನೆ, ಹಿರೇಕೆರೂರು, ಹಾವೇರಿ ಜಿಲ್ಲೆ ಇಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಬಸವಣ್ಣೆಪ್ಪ ರಾಮಪ್ಪ ಹಿಂಗಳಗುಂಡಿ ಎಂಬ ಶಿಕ್ಷಕರಿಂದ ಅವರಿಗೆ ಮಂಜೂರಾದ ಸಾಮಾನ್ಯ ಭವಿಷ್ಯನಿಧಿಯ ಮುಂಗಡದ ಹಣ ರೂ.50,000/- ಗಳ ಚೆಕ್ ಪಾಸು ಮಾಡಲು ರೂ.500/- ಗಳನ್ನು ಕೇಳಿ ಅದನ್ನು ಪಡೆಯುತ್ತಿದ್ದಾಗಲೇ ದಿನಾಂಕ: 19-09-2008ರಂದು ಲೋಕಾಯುಕ್ತರ ಪೊಲೀಸರ ಬಲೆಗೆ ಸಿಕ್ಕಿ ಬಿದ್ದಿದ್ದಕ್ಕಾಗಿ ಇವರ ವಿರುದ್ಧ ಸರ್ಕಾರದ ಅನುಮತಿ ಮೇರೆಗೆ ಲಂಚ ನಿರೋಧಕ ಕಾಯ್ದೆ, 1988ರಡಿಯಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲಾಗಿತ್ತು. ಘನ ನ್ಯಾಯಾಧೀಶರು ಸದರಿ ಪ್ರಕರಣವನ್ನು ವಿಶೇಷ (LOK) ಪ್ರಕರಣ ಸಂಖ್ಯೆ: 4/2009ರಲ್ಲಿ ಅಂಗೀಕರಿಸಿಕೊಂಡು ವಿಚಾರಣೆ ಕೈಗೊಂಡ ಬಳಿಕ ಆಪಾದನೆಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ(1)ರ ದಿನಾಂಕ:03-07-2013ರಂದು ನೀಡಿದ ತೀರ್ಪಿನಲ್ಲಿ ಲಂಚ ನಿರೋಧ ಕಾಯ್ದೆ 1988ರಡಿ ಶ್ರೀ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಇವರನ್ನು ಅಪರಾಧಿಯೆಂದು ತೀರ್ಮಾನಿಸಿ, ಕಲಂ 7, ಲಂಚ ನಿರೋಧ ಕಾಯಿದೆ 1988ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 1 ವರ್ಷ ಸಾದಾ ಶಿಕ್ಷೆ ಮತ್ತು ರೂ.5000 ದಂಡ, ದಂಡ ಪಾವತಿಸಲು ವಿಫಲವಾದರೆ 3 ತಿಂಗಳು ಸಾದಾ ಶಿಕ್ಷೆ ಹಾಗೂ ಕಲಂ 13(1)ಡಿ ಸಹವಾಚನ 13(2) ಲಂಚ ನಿರೋಧ ಕಾಯಿದೆ 1988ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 2 ವರ್ಷ ಸಾದಾ ಶಿಕ್ಷೆ ಮತ್ತು ರೂ. 5000 ದಂಡ, ದಂಡ ಪಾವತಿಸಲು ವಿಫಲವಾದರೆ 6 ತಿಂಗಳು ಸಾದಾ ಶಿಕ್ಷೆ ವಿಧಿಸಿರುತ್ತಾರೆ.

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಕ್ರಮಸಂಖ್ಯೆ(2)ರ ಪತ್ರದಲ್ಲಿ ವಿಚಾರಣೆ ನ್ಯಾಯಾಲಯದ ಆದೇಶದಿಂದಾಗಿ ಆಪಾದಿತರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(1)ರನುಸಾರ ಅವರ ಮೇಲಿನ ಕ್ರಿಮಿನಲ್ ಮೊಕದ್ದಮೆಯಲ್ಲಿ ಕ್ರಿಮಿನಲ್ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ದಿನಾಂಕ:26-06-1996ರ ಸರ್ಕಾರಿ ಸುತ್ತೋಲೆ ಸಂ:ಸಿಆಸುಇ 9 ಸೇಇವಿ 95ರನುಸಾರ ಏಕೆ ಕ್ರಮ ಕೈಗೊಳ್ಳಬಾರದೆಂಬ ಬಗ್ಗೆ ದಿನಾಂಕ:27-11-2013ರಂದು ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಅವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ಕಾರಣ ಕೇಳುವ ನೋಟೀಸಿಗೆ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ರವರು ಉತ್ತರ ನೀಡಿ ತಮ್ಮ ವಿರುದ್ಧ ದಾಖಲಾಗಿದ್ದ ಲೋಕಾಯುಕ್ತ ಲಂಚ ಪ್ರಕರಣದಲ್ಲಿ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇವರು ವಿಶೇಷ ಪ್ರಕರಣ ಸಂಖ್ಯೆ:4/2009ರಲ್ಲಿ ದಿನಾಂಕ:03-07-2013 ರಂದು ನೀಡಿದ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯ ಸಂಚಾರಿ ಪೀಠ ಧಾರವಾಡ ಇಲ್ಲಿ ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆಯನ್ನು ಪಡೆದಿದ್ದು ಸದರಿ ಮೇಲ್ಮನವಿ ಇತ್ಯರ್ಥವಾಗುವವರೆಗೂ ತಮಗೆ ಯಾವುದೇ ದಂಡನೆ ವಿಧಿಸುವುದು ನ್ಯಾಯ ಸಮ್ಮತವಲ್ಲವೆಂದು ತಿಳಿಸಿರುತ್ತಾರೆ. ತಾವು ದಿನಾಂಕ: 31-05-2011ರಲ್ಲಿ ವಯೋ ನಿವೃತ್ತಿ ಹೊಂದಿದ್ದು ವಿಶೇಷ ನ್ಯಾಯಾಲಯದಲ್ಲಿ ತೀರ್ಪು ದಿನಾಂಕ:03-07-2013ರಂದು ಅಂದರೆ ನಾನು ನಿವೃತ್ತಿ ಹೊಂದಿದ 2 ವರ್ಷಗಳ ನಂತರ ಬಂದಿರುತ್ತದೆ. ಆದ್ದರಿಂದ ಕೆ.ಸಿ.ಎಸ್.ಆರ್. ನಿಯಮ 214(1)(ಎ) ರನ್ವಯ ಕ್ರಮ ಜರುಗಿಸಲು ಅವಕಾಶವಿರುವುದಿಲ್ಲವೆಂದು ಹಾಗೂ ಈ ವಿಷಯದಲ್ಲಿ ತಮ್ಮ ವಿರುದ್ಧ ಲೋಕಾಯುಕ್ತ ವಿಚಾರಣೆ ನಡೆಯುತ್ತಿದ್ದು, ವಿಚಾರಣೆ ಮುಗಿಯುವವರೆಗೂ ತಮ್ಮ ಮೇಲೆ ಯಾವುದೇ ಕ್ರಮವನ್ನು ಜರುಗಿಸುವಂತಿಲ್ಲವೆಂದು ತಿಳಿಸಿರುತ್ತಾರೆ.

ಈ ಪ್ರಕರಣವನ್ನು ಸರ್ಕಾರವು ಪರಿಶೀಲಿಸಿದೆ. ದಿನಾಂಕ:26-06-1996ರ ಸರ್ಕಾರಿ ಸುತ್ತೋಲೆ ಸಂ: ಸಿಆಸುಇ 9 ಸೇಇವಿ 95 ರನುಸಾರ ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರೆ ವ್ಯವಹರಣೆ ಹೂಡಿದ್ದಾನೆ ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ ಸರ್ಕಾರಿ ನೌಕರರ ವಿರುದ್ಧ ಕ್ರಮವನ್ನು ಸ್ಥಗಿತಗೊಳಿಸುವಂತಿಲ್ಲ. ಈ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಅವರ ವಾದವನ್ನು ಒಪ್ಪದೇ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಇವರ ಮೇಲಿನ ಭ್ರಷ್ಟಾಚಾರದ ಆರೋಪಗಳು ಕ್ರಿಮಿನಲ್ ನ್ಯಾಯಾಲಯದಲ್ಲಿ ಸಾಭೀತಾಗಿರುವ ಹಿನ್ನೆಲೆಯಲ್ಲಿ ಇವರು ಈಗಾಗಲೆ ನಿವೃತ್ತಿ ಹೊಂದಿರುವ ಕಾರಣ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214(1)(ಎ)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಇವರ ಮಾಸಿಕ ನಿವೃತ್ತಿ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 215 ಆಖಇ 2013, ಬೆಂಗಳೂರು, ದಿನಾಂಕ:23-07-2014**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳಿಂದಾಗಿ ಶ್ರೀ ಬಿ.ಎಸ್. ಮುದಿಗೌಡರ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಇವರ ಮೇಲಿನ ಭ್ರಷ್ಟಾಚಾರದ ಆರೋಪಗಳು ಕ್ರಿಮಿನಲ್ ನ್ಯಾಯಾಲಯದಲ್ಲಿ ಸಾಭೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214(1)(ಎ)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ಮಾಸಿಕ ವಿಶ್ರಾಂತಿ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**P.R. 620**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆಗೆ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2013-14ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 36 ಯೋವಿವಿ 2013, ದಿನಾಂಕ: 04-03-2014.

2) ಹಾವೇರಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕೆ.ಎಲ್.ಎಲ್.ಎ.ಡಿ.ಎಸ್/ಸಿಆರ್-11/2013-14, ದಿನಾಂಕ:27-05-2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ 2013-14ನೇ ಸಾಲಿನಲ್ಲಿ ಹಾವೇರಿ ಜಿಲ್ಲೆಗೆ ಪ್ರತಿ ಶಾಸಕರಿಗೆ ತಲಾ ರೂ.50.00 ಲಕ್ಷಗಳಂತೆ ಒಟ್ಟು ರೂ.300.00 ಲಕ್ಷಗಳು ಹಾಗೂ ವಿಧಾನಪರಿಷತ್ ಸದಸ್ಯರಿಗೆ ರೂ.50.00 ಲಕ್ಷಗಳನ್ನು ಸೇರಿಸಿ ಒಟ್ಟು ರೂ. 350.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿತ್ತು.

ಓದಲಾದ (2)ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಚುನಾವಣಾ ಕಾರ್ಯದ ಒತ್ತಡದ ಹಿನ್ನೆಲೆಯಲ್ಲಿ ಅಂತಿಮ ಕಂತಿನ ಅನುದಾನವನ್ನು ಜಿಲ್ಲಾಧಿಕಾರಿಗಳ ಪಿಡಿ ಖಾತೆಗೆ ದಿನಾಂಕ:31-03-2014ರೊಳಗೆ ಜಮೆ ಮಾಡಲು ಸಾಧ್ಯವಾಗದ ಹಿನ್ನೆಲೆಯಲ್ಲಿ ಸದರಿ ಅನುದಾನವನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 92 ಯೋವಿವಿ 2014, ಬೆಂಗಳೂರು, ದಿನಾಂಕ:25-7-2014**

ಹಾವೇರಿ ಜಿಲ್ಲೆಯ ಆರು ವಿಧಾನಸಭಾ ಕ್ಷೇತ್ರ ಹಾಗೂ ಒಬ್ಬರು ವಿಧಾನಪರಿಷತ್ ಸದಸ್ಯರಿಗೆ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2013-14ನೇ ಸಾಲಿನ ಅಂತಿಮ ಕಂತಿನ ಅನುದಾನವಾಗಿ ರೂ.350.00 ಲಕ್ಷಗಳನ್ನು 2014-015ನೇ ಸಾಲಿನ ಆಯವ್ಯಯದಲ್ಲಿ ಲಭ್ಯವಿರುವ ಅನುದಾನದಲ್ಲಿ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರಸಂ. | ಹಾವೇರಿ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 4575-60-800-0-01 | | | ಒಟ್ಟು |
|---|---|---|---|---|---|
| | | 132 | 422 | 423 | |
| 1 | ಶಿಗ್ಗಾಂವ್ | 28.88 | 15.45 | 5.67 | 50.00 |
| 2 | ಹಾನಗಲ್ | 28.88 | 15.45 | 5.67 | 50.00 |
| 3 | ಹಿರೇಕೆರೂರು | 28.88 | 15.45 | 5.67 | 50.00 |
| 4 | ರಾಣೆಬೆನ್ನೂರು | 28.88 | 15.45 | 5.67 | 50.00 |
| 5 | ಹಾವೇರಿ | 28.88 | 15.45 | 5.67 | 50.00 |
| 6 | ಬ್ಯಾಡಗಿ | 28.88 | 15.45 | 5.67 | 50.00 |
| 7 | ಶ್ರೀ ಸೋಮಣ್ಣ ಸ್ವಾಮಿಲಿಂಗ ಬೇವಿನಮರದ ವಿಧಾನಪರಿಷತ್ ಸದಸ್ಯರು | 28.88 | 15.45 | 5.67 | 50.00 |
| | **ಒಟ್ಟು** | **202.16** | **108.15** | **39.69** | **350.00** |

2. ಬಿಡುಗಡೆಯಾದ ಈ ಅನುದಾನವನ್ನು ಜಿಲ್ಲಾಧಿಕಾರಿಗಳ ವೈಯಕ್ತಿಕ ಠೇವಣಿ ಖಾತೆಯಲ್ಲಿಟ್ಟುಕೊಂಡು ಅಗತ್ಯತೆಗೆ ಅನುಗುಣವಾಗಿ ಖರ್ಚು ಮಾಡತಕ್ಕದ್ದು.

3. ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು ಅಧಿಕೃತ ಜ್ಞಾಪನ ಸಂಖ್ಯೆ:ಯೋಇ 77 ಯೋವಿವಿ 2014, ದಿನಾಂಕ:17-05-2014ರನ್ವಯ ಹೊರಡಿಸಿದ ಮಾರ್ಗಸೂಚಿಯನ್ವಯ ಅನುಷ್ಟಾನಗೊಳಿಸತಕ್ಕದ್ದು.

4. ನಿಯಮಾನುಸಾರ ಹಣ ಬಳಕೆ ಪ್ರಮಾಣ ಪತ್ರವನ್ನು ಆಯಾ ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು. ಬಿಡುಗಡೆ ಮಾಡಿದ ಅನುದಾನವನ್ನು ನಿಗದಿತ ಅವಧಿಯಲ್ಲಿ ಬಳಕೆ ಮಾಡಿಕೊಳ್ಳತಕ್ಕದ್ದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 344 ವೆಚ್ಚ 6/2013, ದಿನಾಂಕ:03-07-2014 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ರಾಮಚಂದ್ರರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ-1 & 2 (ಪ್ರಭಾರ)

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**P.R. 621**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಸುತ್ತೋಲೆ

**ಸಂಖ್ಯೆ:ಯೋಇ 105 ಯೋವಿವಿ 2014 ಬೆಂಗಳೂರು, ದಿನಾಂಕ: 28-07-2014**

**ವಿಷಯ:** ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ (ಕೆ.ಡಿ.ಪಿ.) ಸಮಿತಿಗೆ ನಾಮನಿರ್ದೇಶನ ಮಾಡುವ ಬಗ್ಗೆ

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ: ಪಿಡಿ 309 ಪಿಟಿಪಿ 94, ದಿನಾಂಕ: 07-08-1995.

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಯನ್ನು ಉಲ್ಲೇಖಿತ ಆದೇಶದನ್ವಯ ರಚಿಸಲಾಗಿದೆ. ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ (ಕೆ.ಡಿ.ಪಿ.) ಸಮಿತಿಗೆ 5 ವಿವಿಧ ವರ್ಗಗಳ ಅಂದರೆ ಒಂದು ಸಾಮಾನ್ಯ ವರ್ಗ, ಒಂದು ಪರಿಶಿಷ್ಟ ಜಾತಿ/ಪಂಗಡ, ಒಂದು ಅಲ್ಪಸಂಖ್ಯಾತ, ಒಂದು ಹಿಂದುಳಿದ ವರ್ಗ ಹಾಗೂ ಒಂದು ಮಹಿಳಾ ಅಭ್ಯರ್ಥಿಯನ್ನು ನಾಮನಿರ್ದೇಶನ ಮಾಡಲು ಅವಕಾಶ ಕಲ್ಪಿಸಲಾಗಿದೆ. ಅದೇ ರೀತಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ (ಕೆ.ಡಿ.ಪಿ) ಸಮಿತಿಗೆ 6 ವಿವಿಧ ವರ್ಗಗಳ ಅಂದರೆ ಎರಡು ಸಾಮಾನ್ಯ ವರ್ಗ, ಒಂದು ಪರಿಶಿಷ್ಟ ಜಾತಿ/ಪಂಗಡ, ಒಂದು ಅಲ್ಪಸಂಖ್ಯಾತ, ಒಂದು ಹಿಂದುಳಿದ ವರ್ಗ ಹಾಗೂ ಒಂದು ಮಹಿಳಾ ಅಭ್ಯರ್ಥಿಯನ್ನು ನಾಮನಿರ್ದೇಶನ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಪ್ರಸ್ತುತ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಹಾಗೂ ತ್ವರಿತವಾಗಿ ಅನುಷ್ಠಾನಗೊಳಿಸುವ ಉದ್ದೇಶದಿಂದ ಕೆ.ಡಿ.ಪಿ ಸಮಿತಿಗೆ ಸದಸ್ಯರಾಗಿ ನೇಮಕ ಹೊಂದಲು ಬಯಸುವ ಸದಸ್ಯರು ಕನಿಷ್ಠ ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಯಾವುದಾದರೂ ಒಂದು ಪದವಿಯನ್ನು ಪಡೆದಿರಬೇಕು. ಅಲ್ಲದೇ ನಾಮನಿರ್ದೇಶನಕ್ಕೆ ಪರಿಗಣಿಸಲಾಗಿರುವವರ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಬಾಕಿಯಿರುವುದಿಲ್ಲ ಎಂಬ ಬಗ್ಗೆ ಸಂಬಂಧಪಟ್ಟ ಪ್ರಮಾಣಪತ್ರ ಸಲ್ಲಿಸಬೇಕು. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಿಗದಿತ ಜಾತಿ ಪ್ರಮಾಣ ಪತ್ರದೊಂದಿಗೆ ಈ ಸುತ್ತೋಲೆಯೊಂದಿಗೆ ಲಗತ್ತಿಸಿರುವ ಅರ್ಜಿ ನಮೂನೆಯಂತೆ ಅವಶ್ಯಕ ಮಾಹಿತಿ ನೀಡಿ ಸೂಕ್ತ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಈ ಮೂಲಕ ತಿಳಿಸಲಾಗಿದೆ.

**(ಮಾನ್ಯ ಮುಖ್ಯಮಂತ್ರಿಗಳಿಂದ ಅನುಮೋದಿತ)**

**ಹೆಚ್.ರಾಮಚಂದ್ರರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ-1 & 2 (ಪ್ರಭಾರ),

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪ್ರಗತಿ ಪರಿಶೀಲನಾ ಸಮಿತಿಗಳಿಗೆ ನಾಮನಿರ್ದೇಶನ ಹೊಂದುವ ಅಭ್ಯರ್ಥಿಗಳ ಸ್ವವಿವರಗಳು

### ಅರ್ಜಿ ನಮೂನೆ

| ಕ್ರ.ಸಂ. | ವಿವರಗಳು | |
|---|---|---|
| 1 | ಹೆಸರು | |
| 2 | ತಂದೆ ಹೆಸರು | |
| 3 | ಹುಟ್ಟಿದ ದಿನಾಂಕ ಮತ್ತು ವಯಸ್ಸು | |
| 4 | ಮನೆ ವಿಳಾಸ | |
| 5 | ವಿದ್ಯಾರ್ಹತೆ<br>(ಅಂಕಪಟ್ಟಿ ದೃಢೀಕರಿಸಿ ಲಗತ್ತಿಸುವುದು) | |

| ಕ್ರ.ಸಂ. | ವಿವರಗಳು | |
|---|---|---|
| 6 | ಜಾತಿ ಪ್ರಮಾಣಪತ್ರ | |
| 7 | ಯಾವುದೇ ಕ್ರಿಮಿನಲ್ ಮೊಕದ್ದಮೆ ಹೂಡಿರುವುದಿಲ್ಲ ಎಂದು ಸ್ಥಳೀಯ ಪೊಲೀಸ್ ಠಾಣೆಯಿಂದ ಪಡೆದ ಪ್ರಮಾಣ ಪತ್ರ: | |

ಶಿಫಾರಸ್ಸು ಮಾಡುವವರ ಹೆಸರು :

ಅಭ್ಯರ್ಥಿಯ ಸಹಿ

P.R. 622

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಚನ್ನಗಿರಿ ಕಂದಾಯ ತಾಲ್ಲೂಕು, ದಾವಣಗೆರೆ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 178 ಎಲ್‌ಸಿಎಲ್ 2013, ದಿನಾಂಕ:21-11-2013.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ರವರ ಪತ್ರ ದಿನಾಂಕ: 12-12-2013.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆರವರ ಪತ್ರ ದಿನಾಂಕ: 15-05-2014.

ಪ್ರಸ್ತಾವನೆ :

ದಾವಣಗೆರೆ ಜಿಲ್ಲೆಯ ಚನ್ನಗಿರಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಸಾರ್ವಜನಿಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ:21-11-2013ರ ಪತ್ರದಲ್ಲಿ ಚನ್ನಗಿರಿ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ ಇಬ್ಬರು ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಮೇಲೆ ಓದಲಾದ (2)ರ ದಿನಾಂಕ: 12-12-2013ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಇವರು ಕೇಂದ್ರ ಸರ್ಕಾರದಿಂದ ಯಾವುದೇ ನೋಟರಿಗಳು ನೇಮಕಗೊಂಡಿಲ್ಲವೆಂದು ಹಾಗೂ ರಾಜ್ಯ ಸರ್ಕಾರದಿಂದ ನೇಮಕಗೊಂಡ ಇಬ್ಬರು ನೋಟರಿಗಳಿದ್ದು, ಅವರಿಗೆ ಹೆಚ್ಚಿನ ಕೆಲಸದ ಒತ್ತಡವಿದ್ದು, ಪ್ರಸ್ತುತ ಚನ್ನಗಿರಿ ಕಂದಾಯ ತಾಲ್ಲೂಕಿನಲ್ಲಿ ಹಿರಿಯ ದಿವಾಣಿ ನ್ಯಾಯಾಲಯ ಮತ್ತು ಪ್ರಧಾನ ದಿವಾಣಿ ನ್ಯಾಯಾಲಯ ಹೀಗೆ ಎರಡು ನ್ಯಾಯಾಲಯಗಳು ಕಾರ್ಯನಿರ್ವಹಿಸುತ್ತಿರುವುದರಿಂದ, ಸಾರ್ವಜನಿಕರಿಗೆ ನೋಟರಿ ಸೇವೆಯು ಎಲ್ಲಾ ಸಮಯದಲ್ಲಿ ದೊರೆಯುತ್ತಿಲ್ಲವಾದ್ದರಿಂದ, ಚನ್ನಗಿರಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಅದರಂತೆ, ತಹಶೀಲ್ದಾರ್‌ರವರ ಕಾರ್ಯಾಲಯ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರ ಪತ್ರ ಹಾಗೂ ನ್ಯಾಯವಾದಿಗಳ ಸಂಘ, ಚನ್ನಗಿರಿ, ದಾವಣಗೆರೆ ಜಿಲ್ಲೆ ಇವರ ಸಂಘದ ಸಭಾ ನಡವಳಿಗಳ ಪತ್ರದಲ್ಲಿ, ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂಬ ನಿರ್ಣಯದೊಂದಿಗೆ, ಮೇಲೆ (3)ರಲ್ಲಿ ಓದಲಾದ ದಿನಾಂಕ: 15-5-2014ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು, ಚನ್ನಗಿರಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇರುತ್ತದೆಂಬ ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 178 ಎಲ್‌ಸಿಎಲ್ 2013 ಬೆಂಗಳೂರು, ದಿನಾಂಕ:24-06-2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದಾವಣಗೆರೆ ಜಿಲ್ಲೆಯ ಚನ್ನಗಿರಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್.ಜಯರಾಮು,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

P.R. 623
SC-25

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಜೇವರ್ಗಿ ಕಂದಾಯ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 155 ಎಲ್‌ಸಿಎಲ್ 2013, ದಿನಾಂಕ:11-10-2013.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ ರವರ ಪತ್ರ ದಿನಾಂಕ: 07-12-2013.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಗುಲ್ಬರ್ಗಾ ಜಿಲ್ಲೆರವರ ಪತ್ರ ದಿನಾಂಕ: 26-04-2014.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಸಾರ್ವಜನಿಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ:11-10-2013ರ ಪತ್ರದಲ್ಲಿ ಜೇವರ್ಗಿ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ

ಒಬ್ಬ ನೋಟರಿಯವರಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಮೇಲೆ ಓದಲಾದ (2)ರ ದಿನಾಂಕ: 07–12–2013ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ ಇವರು ಕೇಂದ್ರ ಸರ್ಕಾರದಿಂದ ಯಾವುದೇ ನೋಟರಿಗಳು ನೇಮಕಗೊಂಡಿಲ್ಲವೆಂದು ಹಾಗೂ ರಾಜ್ಯ ಸರ್ಕಾರದಿಂದ ನೇಮಕಗೊಂಡ ಒಬ್ಬರೇ ನೋಟರಿಯವರಿದ್ದು, ಅವರಿಗೆ ಹೆಚ್ಚಿನ ಕೆಲಸದ ಒತ್ತಡವಿದ್ದು ಜೇವರ್ಗಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ ಇವರಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂಬ ಅಭಿಪ್ರಾಯದ ಪತ್ರದೊಂದಿಗೆ, ಮೇಲೆ (3)ರಲ್ಲಿ ಓದಲಾದ ದಿನಾಂಕ:26–04–2014ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರು, ಜೇವರ್ಗಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇರುತ್ತದೆಂಬ ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 155 ಎಲ್‌ಸಿಎಲ್ 2013 ಬೆಂಗಳೂರು, ದಿನಾಂಕ: 24–06–2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಎಸ್.ಜಯರಾಮು,**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 624**
**SC-25**

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ವಿಶ್ವವಿದ್ಯಾನಿಲಯಕ್ಕೆ ಜಮೀನು ಮಂಜೂರು ಮಾಡಿರುವ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 19 ಎಲ್‌ಜಿಟಿ 2006, ದಿನಾಂಕ: 31–08–2007
2. ಶಿಕ್ಷಣ ಇಲಾಖೆಯ ಆದೇಶ ಸಂಖ್ಯೆ: ಇಡಿ 18 ಯುಆರ್‌ಸಿ 2007, ದಿನಾಂಕ: 14–11–2007
3. ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಟಿಎಂಕೆ)/ಸಿಆರ್ 559/ 2006–07, ದಿನಾಂಕ: 27–05–2014
4. ದಿನಾಂಕ: 09–06–2014ರಂದು ಮಾನ್ಯ ಉನ್ನತ ಶಿಕ್ಷಣ ಸಚಿವರು ಹಾಗೂ ದಿನಾಂಕ: 27–06–2014ರಂದು ಮಾನ್ಯ ಕಾನೂನು ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ, ಬಿದರಕಟ್ಟೆ ಗ್ರಾಮದ ಸರ್ವೆ ನಂ. 23ರಲ್ಲಿನ 24–25 ಎಕರೆ, ಸರ್ವೆ ನಂ. 24ರಲ್ಲಿನ 25–02 ಎಕರೆ, ಸರ್ವೆ ನಂ. 25ರಲ್ಲಿ 25–13 ಎಕರೆ, ಸರ್ವೆ ನಂ. 26ರಲ್ಲಿನ 30–00 ಎಕರೆ, ಸರ್ವೆ ನಂ. 34ರಲ್ಲಿನ 26–34 ಎಕರೆ ಮತ್ತು ತಿಮ್ಮಸಂದ್ರ ಗ್ರಾಮದ ಸರ್ವೆ ನಂ. 17ರಲ್ಲಿನ 24–05 ಎಕರೆ, ಸರ್ವೆ ನಂ. 18ರಲ್ಲಿನ 29–21 ಎಕರೆ ಹಾಗೂ ದೊಮ್ಮನಕುಪ್ಪೆ ಗ್ರಾಮದ ಸರ್ವೆ ನಂ. 32ರಲ್ಲಿನ 95–05 ಎಕರೆ ಹೀಗೆ ಒಟ್ಟು 280–25 ಎಕರೆ ಜಮೀನನ್ನು ತುಮಕೂರು ವಿಶ್ವವಿದ್ಯಾನಿಲಯದ ಸ್ಥಾಪನೆ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಿ ಶಿಕ್ಷಣ ಇಲಾಖೆಗೆ ವರ್ಗಾಯಿಸಿ ಆದೇಶಿಸಲಾಗಿದೆ.

2) ಕಂದಾಯ ಇಲಾಖೆಯ ಮಂಜೂರಾತಿ ಆದೇಶದಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಶಿಕ್ಷಣ ಇಲಾಖೆಯ ಆದೇಶದಲ್ಲಿ ತುಮಕೂರು ವಿಶ್ವವಿದ್ಯಾಲಯ ಸ್ಥಾಪನೆಗಾಗಿ, ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಬಿದರಕಟ್ಟೆ ಗ್ರಾಮದ ಸರ್ವೆ ನಂ. 23ರಲ್ಲಿನ 24–25 ಎಕರೆ, ಸರ್ವೆ ನಂ. 24ರಲ್ಲಿನ 25–02 ಎಕರೆ, ಸರ್ವೆ ನಂ. 25ರಲ್ಲಿ 25–13 ಎಕರೆ, ಸರ್ವೆ ನಂ. 26ರಲ್ಲಿನ 30–00 ಎಕರೆ, ಸರ್ವೆ ನಂ. 34ರಲ್ಲಿನ 26–34 ಎಕರೆ ಮತ್ತು ತಿಮ್ಮಸಂದ್ರ ಗ್ರಾಮದ ಸರ್ವೆ ನಂ. 17ರಲ್ಲಿನ 24–05 ಎಕರೆ, ಸರ್ವೆ ನಂ. 18ರಲ್ಲಿನ 29–21 ಎಕರೆ ಹಾಗೂ ದೊಮ್ಮನಕುಪ್ಪೆ ಗ್ರಾಮದ ಸರ್ವೆ ನಂ. 32ರಲ್ಲಿನ 95–05 ಎಕರೆ ಹೀಗೆ ಒಟ್ಟು 280–25 ಎಕರೆ ಜಮೀನನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಿ ಆದೇಶಿಸಲಾಗಿದೆ.

3) ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ವರದಿ ಸಲ್ಲಿಸಿ, ತುಮಕೂರು ವಿಶ್ವವಿದ್ಯಾಲಯಕ್ಕೆ ಮಂಜೂರು ಮಾಡಲಾದ ಜಮೀನು ಅರಣ್ಯ ಇಲಾಖೆಗೆ ಸೇರಿದ್ದು (ಡೀಮ್ಡ್ ಫಾರೆಸ್ಟ್) ತುಮಕೂರು ವಿಶ್ವವಿದ್ಯಾಲಯದ ಕುಲಪತಿಗಳ ಹೆಸರಿನಲ್ಲಿರುವ ಜಮೀನನ್ನು ಅರಣ್ಯ ಇಲಾಖೆಯ ಡೀಮ್ಡ್ ಫಾರೆಸ್ಟ್ ಎಂದು ಖಾತಾ ಬದಲಾವಣೆಯಾಗಬೇಕೆಂದು ತಿಳಿಸಿದ್ದು, ಈ ಸಂಬಂಧ ಈಗಾಗಲೇ ಆದೇಶಿಸಿರುವ ಕಂದಾಯ ಇಲಾಖೆ ಮತ್ತು ಉನ್ನತ ಶಿಕ್ಷಣ ಇಲಾಖೆಯ ಆದೇಶಗಳನ್ನು ಮಾರ್ಪಡಿಸಿ, ಮರು ಆದೇಶ ಹೊರಡಿಸಬೇಕಾಗಿರುವುದರಿಂದ, ಕಂದಾಯ ಇಲಾಖೆ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಮತ್ತು ಅರಣ್ಯ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಹಂತದಲ್ಲಿ ಜಂಟಿ ಸಭೆಯನ್ನು ನಿಗಧಿಪಡಿಸಿ ನಿರ್ಣಯ ಕೈಗೊಳ್ಳುವುದು ಸೂಕ್ತವೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

4) ದಿನಾಂಕ: 09-06-2014ರಂದು ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ಕಂದಾಯ, ಅರಣ್ಯ ಮತ್ತು ಪರಿಸರ ಹಾಗೂ ಶಿಕ್ಷಣ ಇಲಾಖೆಯ ಅಧಿಕಾರಿಗಳೊಂದಿಗೆ ನಡೆದ ಸಭೆಯಲ್ಲಿ ಕಂದಾಯ ಇಲಾಖೆಯ ಆದೇಶ ಸಂಖ್ಯೆ: ಆರ್‌ಡಿ 19 ಎಲ್‌ಜಿಟಿ 2006, ದಿನಾಂಕ: 31-08-2007ರ ಆದೇಶವನ್ನು ಹಿಂಪಡೆದು ಪರಿಷ್ಕೃತ ಆದೇಶ ಹೊರಡಿಸಿ ಈಗಾಗಲೇ ಶಿಕ್ಷಣ ಇಲಾಖೆಗೆ ವರ್ಗಾಯಿಸಿರುವ ಜಮೀನನ್ನು ವಿಶ್ವವಿದ್ಯಾಲಯದ ಕ್ಯಾಂಪಸ್ ಅಭಿವೃದ್ಧಿಗೆ ಕಾಯ್ದಿರಿಸಿ ಅರಣ್ಯ ಇಲಾಖೆಗೆ ಮ್ಯುಟೇಷನ್ ಮಾಡುವ ಸಂಬಂಧ ಕಂದಾಯ ಇಲಾಖೆಗೆ ಕ್ರಮವಹಿಸಬೇಕೆಂದು ಸೂಚಿಸಿರುತ್ತಾರೆ.

5) ನಂತರ ಈ ವಿಷಯದ ಬಗ್ಗೆ ದಿನಾಂಕ: 27-06-2014ರಂದು ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಪಶುಸಂಗೋಪನಾ ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತುಮಕೂರು ಜಿಲ್ಲಾಧಿಕಾರಿಗಳು, ಬಿದರಕಟ್ಟೆ ಮತ್ತು ಇನ್ನಿತರೆ ಗ್ರಾಮಗಳಲ್ಲಿನ ಒಟ್ಟು 240-10 ಎಕರೆ ವಿಸ್ತೀರ್ಣದ ಜಮೀನನ್ನು ತುಮಕೂರು ವಿಶ್ವವಿದ್ಯಾಲಯಕ್ಕೆ ಹಕ್ಕು ಬದಲಾವಣೆ ಮಾಡಲು ಕಂದಾಯ ಇಲಾಖೆಯ ಅನುಮೋದನೆಯ ಅವಶ್ಯಕತೆಯಿದ್ದು, ದಿನಾಂಕ: 31-08-2007ರ ಆದೇಶವನ್ನು ರದ್ದುಪಡಿಸಿದಲ್ಲಿ ಪುನಃ ಈ ಜಮೀನು ಕಂದಾಯ ಇಲಾಖೆಯ ವ್ಯಾಪ್ತಿಗೆ ಬರುವುದರಿಂದ ಸದರಿ ಜಮೀನನ್ನು ಪುನಃ ಮಂಜೂರು ಮಾಡಲು ಕ್ರಮವಹಿಸಬೇಕಾಗಿರುವುದರಿಂದ, ಸದರಿ ಜಮೀನನ್ನು ಶಿಕ್ಷಣ ಇಲಾಖೆಗೆ ವರ್ಗಾವಣೆ ಮಾಡಿರುವುದನ್ನು ಮಾರ್ಪಡಿಸಿ, ಅರಣ್ಯ ಇಲಾಖೆಗೆ ಡೀಮ್ಡ್ ಫಾರೆಸ್ಟ್ ಎಂದು ವರ್ಗಾವಣೆ ಮಾಡುವಂತೆ ಮಾನ್ಯ ಕಾನೂನು ಸಚಿವರು ಸೂಚಿಸಿರುತ್ತಾರೆ.

ತತ್ಸಂಬಂಧದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 33 ಎಲ್‌ಜಿಟಿ 2014, ಬೆಂಗಳೂರು, ದಿನಾಂಕ: 7ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಬಿದರಕಟ್ಟೆ ಗ್ರಾಮದ ಸರ್ವೆ ನಂ. 23ರಲ್ಲಿನ 24-25 ಎಕರೆ, ಸರ್ವೆ ನಂ. 24ರಲ್ಲಿನ 25-02 ಎಕರೆ, ಸರ್ವೆ ನಂ. 25ರಲ್ಲಿ 25-13 ಎಕರೆ, ಸರ್ವೆ ನಂ. 26ರಲ್ಲಿನ 30-00 ಎಕರೆ, ಸರ್ವೆ ನಂ. 34ರಲ್ಲಿನ 26-34 ಎಕರೆ ಮತ್ತು ತಿಮ್ಮಸಂದ್ರ ಗ್ರಾಮದ ಸರ್ವೆ ನಂ. 17ರಲ್ಲಿನ 24-05 ಎಕರೆ, ಸರ್ವೆ ನಂ. 18ರಲ್ಲಿನ 29-21 ಎಕರೆ ಹಾಗೂ ದೊಮ್ಮನಕುಪ್ಪೆ ಗ್ರಾಮದ ಸರ್ವೆ ನಂ. 32ರಲ್ಲಿನ 95-05 ಎಕರೆ ಹೀಗೆ ಒಟ್ಟು 280-25 ಎಕರೆ ಜಮೀನನ್ನು ತುಮಕೂರು ವಿಶ್ವವಿದ್ಯಾನಿಲಯ ಸ್ಥಾಪನೆ ಉದ್ದೇಶಕ್ಕಾಗಿ ಕಾಯ್ದಿರಿಸಿ ಶಿಕ್ಷಣ ಇಲಾಖೆಗೆ ವರ್ಗಾಯಿಸಿರುವ ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 19 ಎಲ್‌ಜಿಟಿ 2006, ದಿನಾಂಕ: 31-08-2007ರ ಆದೇಶವನ್ನು ಮಾರ್ಪಡಿಸಿ ಸದರಿ ಜಮೀನನ್ನು ಅರಣ್ಯ ಇಲಾಖೆಗೆ ಡೀಮ್ಡ್ ಫಾರೆಸ್ಟ್ ಎಂದು ವರ್ಗಾವಣೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**PR 607**
**SC 25**

**ಟಿ. ನಾರಾಯಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಂದಾಯ ಇಲಾಖೆ
(ಭೂ ಮಂಜೂರಾತಿ-3)

## ಒಳಾಡಳಿತ ಸಚಿವಾಲಯ

**ವಿಷಯ :** ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣೆ ಅಧಿನಿಯಮ (POCSO) 2012ರ ಕಲಂ-32ರಡಿಯಲ್ಲಿ ದಾಖಲಾದ ಪ್ರಕರಣಗಳಲ್ಲಿ ಕಾರ್ಯ ನಿರ್ವಹಿಸಲು ವಿಶೇಷ ಸರ್ಕಾರಿ ಅಭಿಯೋಜಕರನ್ನು ನೇಮಿಸುವ ಕುರಿತು

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 538 ಪಿಪಿಇ 2013, ದಿನಾಂಕ: 10-12-2013
2. ಸರ್ಕಾರದ ಆದೇಶ ಸಂಖ್ಯೆ: ಲಾ 28 ಎಲ್‌ಸಿಇ 2014, ದಿನಾಂಕ: 23-04-2014
3. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 780/2014, ದಿನಾಂಕ: 07-07-2014ರ ತೀರ್ಪು

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣೆ ಅಧಿನಿಯಮ 2012ರ ಅಡಿಯಲ್ಲಿ ದಾಖಲು ಮಾಡಿದ ಪ್ರಕರಣಗಳ ವಿಚಾರಣೆಗಳಲ್ಲಿ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರುಗಳನ್ನೇ ಅದೇ ಕಾಯ್ದೆಯ ಕಲಂ-32ರಡಿಯಲ್ಲಿ ಕಾರ್ಯ ನಿರ್ವಹಿಸಲು ವಿಶೇಷ ಸರ್ಕಾರಿ ಅಭಿಯೋಜಕರುಗಳನ್ನಾಗಿ ಘೋಷಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು The Protection of Children from Sexual Offences Act, 2012 ಕಲಂ 28ರ ಪ್ರಕಾರ ಸದರಿ ಕಾಯ್ದೆಯ ಅಡಿಯಲ್ಲಿನ ಅಪರಾಧ ಪ್ರಕರಣಗಳ ವಿಚಾರಣೆ ನಡೆಸಲು ಈ ಕೆಳಕಂಡ ನ್ಯಾಯಾಲಯಗಳನ್ನು **"ವಿಶೇಷ ನ್ಯಾಯಾಲಯ"**ಗಳನ್ನಾಗಿ ನಿಗಧಿಪಡಿಸಿ ಆದೇಶಿಸಿದೆ.

1. 50ನೇ ಅಧಿಕ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು
3. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾಂ
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ
6. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್
7. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ

8. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ
9. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಬಳ್ಳಾಪುರ
10. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು
11. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ
12. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ
13. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ
14. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ
15. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗಾ
16. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ
17. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ
18. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಕ್ಷಿಣ ಕನ್ನಡ, ಮಂಗಳೂರು
19. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉತ್ತರ ಕನ್ನಡ, ಕಾರವಾರ
20. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಡಿಕೇರಿ
21. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ
22. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ
23. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ
24. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು
25. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ
26. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಯಚೂರು
27. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ
28. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು
29. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉಡುಪಿ
30. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಯಾದಗೀರ್

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 780/2014ರಲ್ಲಿ ದಿನಾಂಕ: 07–07–2014ರಂದು ನೀಡಿರುವ ತೀರ್ಪಿನಲ್ಲಿ ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣೆ ಅಧಿನಿಯಮ 2012ರ ಕಲಂ 32 ರಡಿಯಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರನ್ನು ನೇಮಕ ಮಾಡುವ ಸಂಬಂಧದಲ್ಲಿ ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ.

> ``With or without creation of special post of Special Public Porsecutor for every special court, specific case-wise appointments will be made so as to ensure that the other Public Prosecutors or Assistant Public Prosecutors are not entrusted the task of prosecuting the cases under the Protection of Children for Sexual Offences Act, 2012. It is also stated at the bar that necessary orders in that regard will be immediately issued so as to ensure that the provisions of Section 32 are followed in letter and spirit.''

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ದಂಡ ಪ್ರಕ್ರಿಯೆ ಸಂಹಿತೆ ಕಲಂ 24ರ ಅಡಿಯಲ್ಲಿ ಸರ್ಕಾರಿ ಅಭಿಯೋಜಕರನ್ನು ನೇಮಕ ಮಾಡುವ ಬಗ್ಗೆ ನಿಯಮಾವಳಿಗಳನ್ನು ನೀಡಲಾಗಿದೆ. ಸದರಿ ನಿಯಮಾವಳಿಗಳ ನಿಯಮ 24(6)ರ ಪ್ರಕಾರ ಯಾವ ರಾಜ್ಯದಲ್ಲಿ `Regarding Cadre of Prosecuting Officer' ಆಗಿ ಕೆಲಸ ನಿರ್ವಹಿಸುತ್ತಿದ್ದಾರೆಯೋ ಅವರನ್ನು ಸರ್ಕಾರಿ ಅಭಿಯೋಜಕರು/ಅಧಿಕ ಸರ್ಕಾರಿ ಅಭಿಯೋಜಕರೆಂದು ನೇಮಕ ಮಾಡಬಹುದೆಂದು ನಿಯಮವಿರುತ್ತದೆ. ನಿಯಮಾವಳಿಗಳ ನಿಯಮ 24(7)ರ ಪ್ರಕಾರ 7 ವರ್ಷಗಳ ವಕೀಲಿ ವೃತ್ತಿ ಮಾಡಿದವರನ್ನು ಸರ್ಕಾರಿ ಅಭಿಯೋಜಕರನ್ನಾಗಿ ನೇಮಕ ಮಾಡಬಹುದೆಂದು ನಿಯಮವಿರುತ್ತದೆ. ದಂಡ ಪ್ರಕ್ರಿಯೆ ಸಂಹಿತೆ ಕಲಂ 24(9)ರ ಪ್ರಕಾರ ಯಾವುದೇ ವ್ಯಕ್ತಿಯು ವಕೀಲರು, ಸರ್ಕಾರಿ ಅಭಿಯೋಜಕರು, ಅಧಿಕ ಸರ್ಕಾರಿ ಅಭಿಯೋಜಕರು, ಸಹಾಯಕ ಸರ್ಕಾರಿ ಅಭಿಯೋಜಕರು ಅಥವಾ ಅಭಿಯೋಜನಾ ಅಧಿಕಾರಿ ಅಂತ ಕೆಲಸ ನಿರ್ವಹಿಸಿದ ಅವಧಿಯನ್ನು ವಕೀಲಿ ವೃತ್ತಿ ಎಂದು ಪರಿಗಣಿಸಬೇಕೆಂದು ನಿಯಮವಿರುತ್ತದೆ. ಆದ್ದರಿಂದ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸರ್ಕಾರಿ ಅಭಿಯೋಜಕರು ಅಥವಾ ಪ್ಲೀಡರ್ ಇವರನ್ನು ಅಡ್ವೋಕೇಟ್ ಎಂದು ಪರಿಗಣಿಸಬೇಕೆಂದು ನಿಯಮವಿದ್ದು, ಅಭಿಯೋಜನಾ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರು ಸಹ ವಕೀಲರಾಗಿರುತ್ತಾರೆ. ಅವರ ಸೇವೆಯನ್ನು ವಕೀಲಿ ವೃತ್ತಿಯ ಸೇವೆಯೆಂದು ಪರಿಗಣಿಸಬೇಕಾಗುತ್ತದೆ. ಅಭಿಯೋಜನಾ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು ಹಾಗೂ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರುಗಳು ಸರ್ಕಾರಿ ಅಭಿಯೋಜಕರಾಗಿ ಬಡ್ತಿ ಹೊಂದುವ ಕಾಲಕ್ಕೆ ಸುಮಾರು 10 ವರ್ಷಗಳ ಸೇವೆಯನ್ನು ನಿರ್ವಹಿಸಿರುತ್ತಾರೆ ಹಾಗೂ ಸೇವಾವಧಿಯಲ್ಲಿ ಸರ್ಕಾರದ ಪರವಾಗಿ ನ್ಯಾಯಾಲಯಗಳಲ್ಲಿ ಪ್ರಕರಣಗಳನ್ನು ನಡೆಸಿರುತ್ತಾರೆ. ಆದ್ದರಿಂದ, ಅವರ ಸೇವೆಯನ್ನು ವಕೀಲಿ ವೃತ್ತಿಯ ಸೇವೆಯೆಂದು ಪರಿಗಣಿಸಿ ಅವರಿಗೆ ಸರ್ಕಾರಿ ಅಭಿಯೋಜಕರ ಹುದ್ದೆಗೆ ಬಡ್ತಿ ನೀಡುವ ನಿಯಮಾವಳಿ ಇರುತ್ತದೆ.

POCSO ಕಾಯ್ದೆ 32ರಡಿಯ ನಿಯಮ 1ರಲ್ಲಿ ಸರ್ಕಾರವು ಸರ್ಕಾರಿ ಅಭಿಯೋಜಕರನ್ನು POCSO ಕೋರ್ಟ್‌ನಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರೆಂದು ನೇಮಕ ಮಾಡಬಹುದಾಗಿದ್ದು, ಕಲಂ 32(2)ರ ಪ್ರಕಾರ ವಕೀಲಿ ವೃತ್ತಿಯ ಸೇವೆಯನ್ನು 7 ವರ್ಷವೆಂದು ನಿಗದಿ ಮಾಡಿದ್ದಾಗಿರುತ್ತದೆ. ಆದ್ದರಿಂದ, ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಇರುವವರೂ, ಸಹಾಯಕ ಸರ್ಕಾರಿ ಅಭಿಯೋಜಕರು/ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ

ಹುದ್ದೆಯಲ್ಲಿ 10 ವರ್ಷಗಳ ಸೇವೆಯನ್ನು ಸಲ್ಲಿಸಿರುವುದರಿಂದ, ಅವರನ್ನು ವಿಶೇಷ ಸರ್ಕಾರಿ ಅಭಿಯೋಜಕರೆಂದು POCSO ಕೋರ್ಟ್‌ನಲ್ಲಿ ಪ್ರಕರಣ ನಡೆಸಲು ನೇಮಕ ಮಾಡಿಕೊಳ್ಳಲು ಯವುದೇ ಬಾಧಕವಿರುವುದಿಲ್ಲ.

ಆದ್ದರಿಂದ, ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 538 ಪಿಪಿಇ 2013, ದಿನಾಂಕ: 10–12–2013ನ್ನು ಮಾರ್ಪಡಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 83 ಪಿಪಿಇ 2014, ಬೆಂಗಳೂರು, ದಿನಾಂಕ: 25ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣೆ ಅಧಿನಿಯಮ (POCSO) 2012ರ ಅಡಿಯಲ್ಲಿ ದಾಖಲು ಮಾಡಿದ ಪ್ರಕರಣಗಳ ವಿಚಾರಣೆಗಳಲ್ಲಿ ಈ ಕೆಳಕಂಡ ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರು ದಂಡ ಪ್ರಕ್ರಿಯಾ ಸಂಹಿತೆ ಕಲಂ 24(7) & 24(9)ರ ಪ್ರಕಾರ ವಕೀಲರೆಂದು ಪರಿಗಣಿಸಿರುವುದರಿಂದ, ಇವರನ್ನು POCSO ಕಾಯ್ದೆಯ ಕಲಂ–32 (1)ರಡಿಯಲ್ಲಿ ಮುಂದಿನ ಆದೇಶದವರೆಗೆ ವಿಶೇಷ ಸರ್ಕಾರಿ ಅಭಿಯೋಜಕರೆಂದು ಪದನಾಮೀಕರಿಸಿ ಆದೇಶಿಸಿದೆ.

1. 50ನೇ ಅಧಿಕ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು
3. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾಂ
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ
6. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್
7. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ
8. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ
9. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಬಳ್ಳಾಪುರ
10. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು
11. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ
12. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ
13. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ
14. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ
15. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗಾ
16. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ
17. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ
18. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಕ್ಷಿಣ ಕನ್ನಡ, ಮಂಗಳೂರು
19. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉತ್ತರ ಕನ್ನಡ, ಕಾರವಾರ
20. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಡಿಕೇರಿ
21. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ
22. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ
23. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ
24. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು
25. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ
26. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಯಚೂರು
27. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ
28. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು
29. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉಡುಪಿ
30. ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಯಾದಗೀರ್

ವಿಶೇಷ ಸರ್ಕಾರಿ ಅಭಿಯೋಜಕರು ಮುತುವರ್ಜಿ ವಹಿಸಿ, POCSO ಕಾಯ್ದೆ ಅಡಿ ದಾಖಲಾದ ಪ್ರಕರಣಗಳನ್ನು ನಿರ್ವಹಿಸತಕ್ಕದ್ದು ಹಾಗೂ ತ್ರೈಮಾಸಿಕವಾಗಿ ಪ್ರಕರಣಗಳ ಹಂತ ಹಾಗೂ ವಿವರಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

PR 609

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಎಂ. ಗಡ್ಡಿ, ಸಿಪಿಸಿ–2324, ಗೋಕುಲ ರೋಡ್ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡ ನಗರ ಇವರ ಆದೇಶ ಸಂಖ್ಯೆ : ಸಿಬ್ಬಂದಿ–3/ನಿಯಮ–6–08–2010 (ಆದೇಶ ಪುಸ್ತಕ ಸಂಖ್ಯೆ: 58/2013) ದಿನಾಂಕ: 30–01–2013
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/70/2012–13 (ಓ.ಬಿ. ಸಂಖ್ಯೆ: 31/2013–14) ದಿನಾಂಕ: 30–09–2013
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: ––– 11–2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)16/2013–14, ದಿನಾಂಕ: 04–03–2014 ಮತ್ತು 06–05–2014
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 81 ಸಿಎನ್‌ಎಸ್ 2014, ದಿನಾಂಕ:
14–07–2014

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಗಡ್ಡಿ, ಸಿಪಿಸಿ–2324, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಗೋಕುಲ ರೋಡ್ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ದುರ್ನಡತೆ, ಬೇಜವಾಬ್ದಾರಿತನ ಹಾಗೂ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

> "ನೀವು ಶ್ರೀ ಎಸ್.ಎಂ. ಗಡ್ಡಿ, ಸಿಪಿಸಿ–2324, ಹುಬ್ಬಳ್ಳಿ ಗೋಕುಲ ರೋಡ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ಶ್ರೀ ಗುರು ಎಸ್ ಪಾಟೀಲ ಸಾ॥ ಗೋಕುಲ ರೋಡ ಹುಬ್ಬಳ್ಳಿ ಇವರ ತಮ್ಮನಾದ ಪ್ರವೀಣ ಇವನ ಬಳಿಯಿದ್ದ 4,500/– ರೂ. ನಗದು ಹಣ ಹಾಗೂ ಚಿನ್ನದ ಸರವನ್ನು ತಾರೀಖು 08–02–2010ರಂದು ತೆಗೆದುಕೊಂಡು ಸುಮಾರು ಒಂದು ತಿಂಗಳ ಕಾಲ ಅನಧಿಕೃತವಾಗಿ ನಿಮ್ಮ ಬಳಿ ಇಟ್ಟುಕೊಂಡು ಅರ್ಜಿದಾರರಾದ ಶ್ರೀ ಗುರು ಪಾಟೀಲ ಇವರು ಹಿಂದಿರುಗಿಸಲು ಕೇಳಿದಾಗ ನೀವು ಮತ್ತೊಬ್ಬ ಪೊಲೀಸ್‌ನವರ ಕಡೆಗೆ ಇರುವುದಾಗಿ ತಿಳಿಸಿ ಅರ್ಜಿದಾರರಿಗೆ ಸದರಿ ವಸ್ತುಗಳನ್ನು ಹಿಂದಿರುಗಿಸದೇ ಸತಾಯಿಸಿ, ಅರ್ಜಿದಾರರಿಗೆ ದುರುದ್ದೇಶದಿಂದ ತೊಂದರೆ ನೀಡಿ ಕರ್ತವ್ಯದಲ್ಲಿ ಇಲಾಖೆಯ ನಿಯಮಗಳನ್ನು ಪಾಲಿಸದೇ ಘೋರವಾದ ದುರ್ನಡತೆಯಿಂದ ವರ್ತಿಸಿದ್ದಲ್ಲದೆ, ಬೇಜವಾಬ್ದಾರಿ ಹಾಗೂ ನಿರ್ಲಕ್ಷ್ಮತನ ಎಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು, ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡ ನಗರ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 30–01–2013ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ "ಕಡ್ಡಾಯ ನಿವೃತ್ತಿಗೊಳಿಸಿ" ಅಮಾನತ್ತಿನ ಅವಧಿ ದಿನಾಂಕ: 04–05–2010ರಿಂದ ದಿನಾಂಕ: 03–02–2011ರವರೆಗೆ ಒಟ್ಟು 276 ದಿನಗಳನ್ನು ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30–09–2013ರ ಆದೇಶದಲ್ಲಿ ಮೇಲ್ಮನವಿದಾರರ ಮೇಲಿನ ಆರೋಪಗಳು ದೃಢಪಡುವುದಾದರೂ, ಮೇಲ್ಮನವಿದಾರರು ಇಲಾಖೆಯಲ್ಲಿ ಸಲ್ಲಿಸಿರುವ ಉತ್ತಮ ಸೇವೆಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರದ ಆದೇಶವನ್ನು ಕೆಳಕಂಡಂತೆ ಮಾರ್ಪಡಿಸಿರುತ್ತಾರೆ.

1. ಶ್ರೀ ಎಸ್.ಎಂ. ಗಡ್ಡಿ, ನಿವೃತ್ತ ಸಿಪಿಸಿ–2324, ಗೋಕುಲ ರೋಡ್ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇವರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡಲಾಗಿದೆ. ಸದರಿಯವರು ಪೊಲೀಸ್ ಕಮೀಷನರ್, ಹುಬ್ಬಳ್ಳಿ–ಧಾರವಾಡ ನಗರ ಇವರ ಮುಂದೆ ಮುಂದಿನ ಸ್ಥಳ ನಿಯುಕ್ತಿಗಾಗಿ ವರದಿ ಮಾಡಿಕೊಳ್ಳಲಾಗುವುದು.
2. ಶ್ರೀ ಎಸ್.ಎಂ. ಗಡ್ಡಿ, ನಿವೃತ್ತ ಸಿಪಿಸಿ–2324, ಗೋಕುಲ ರೋಡ್ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇವರ ವೇತನವನ್ನು ಸಿಪಿಸಿ ಹುದ್ದೆಯ ಕನಿಷ್ಠ ಹಂತಕ್ಕೆ ಐದು ವರ್ಷಗಳ ಕಾಲ ಧಕ್ಕೆಯಾಗುವಂತೆ ಇಳಿಸಲಾಗಿದೆ. ಇವರು ಶಿಕ್ಷಾವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಗಳಿಗೆ ಅರ್ಹರಿರುವುದಿಲ್ಲ.
3. ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಇವರು ಅಮಾನತ್ತಿನ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

4. ವಜಾಗೊಂಡ ದಿನಾಂಕದಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ದಿನಾಂಕದವರೆಗೆ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು ಕೆ.ಸಿ.ಎಸ್. ನಿಯಮ 1958ರ ನಿಯಮ 8(14–ಎ) ಪ್ರಕಾರ ಕರ್ತವ್ಯದಿಂದ ಹೊರಗುಳಿದ ಅವಧಿಯೆಂದು ಪರಿಗಣಿಸಿದೆ (Dies-non)

5. ಈ ಆದೇಶವು ಮೇಲ್ಮನವಿದಾರರು ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ್ದರೂ ಸಹಾ, ಸದರಿ ದಂಡನೆಯು ಆರೋಪಕ್ಕೆ ಅನುಗುಣವಾಗಿರುವುದಿಲ್ಲ. ಮೇಲಾಗಿ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುವ ಕಾರಣ ಡಿ.ಜಿ. ಮತ್ತು ಐ.ಜಿ.ಪಿ. ಯವರು ದಿನಾಂಕ: 30–09–2013ರಂದು ನೀಡಿದ್ದ ಆದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 172 ಪೊಸಿಅ 2013, ಬೆಂಗಳೂರು, ದಿನಾಂಕ: 30ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಗಡ್ಡಿ, ಸಿಪಿಸಿ–2324, ಗೋಕುಲ ರೋಡ್ ಪೊಲೀಸ್ ಠಾಣೆ, ಹುಬ್ಬಳ್ಳಿ–ಧಾರವಾಡ ನಗರ ಇವರಿಗೆ ಮೇಲ್ಮನವಿ ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ನೈಸರ್ಗಿಕ ನ್ಯಾಯದ ತತ್ವಗಳನ್ನು ಪಾಲಿಸುವ ಸಲುವಾಗಿ ಪರಿಷ್ಕರಿಸಿ, ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ (without cummulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೇಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

**PR 610**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆರ್. ವಿರೂಪಾಕ್ಷಸ್ವಾಮಿ, ಪಿಎಸ್ಐ, ಕೇಂದ್ರ ವಲಯ, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಪನ್ಸಿ/04/ಡಿಇ/2008–09 (ಓ.ಬಿ. ಸಂಖ್ಯೆ: 09/2013–14) ದಿನಾಂಕ: 16–04–2013
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/12/2013–14 (ಓ.ಬಿ. ಸಂಖ್ಯೆ: 39/2013–14) ದಿನಾಂಕ: 21–01–2014
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30–01–2014
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)87/2013–14, ದಿನಾಂಕ: 21–02–2014
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 83 ಸಿಎನ್‌ಎಸ್ 2014, ದಿನಾಂಕ: 14–07–2014

**ಪ್ರಸ್ತಾವನೆ:**

ಶ್ರೀ ಆರ್. ವಿರೂಪಾಕ್ಷಸ್ವಾಮಿ, ಪಿ.ಎಸ್.ಐ., ಕೇಂದ್ರ ವಲಯ, ಬೆಂಗಳೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ನೆಲಮಂಗಲ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

"1. ನೆಲಮಂಗಲ ಪೊಲೀಸ್ ಠಾಣೆ ಮೊ.ಸಂ. 466/05ರ ಪ್ರಕರಣದಲ್ಲಿ ಕೊಲೆ ಮಾಡಿದ ಆರೋಪಿಯಾದ ಬೆತ್ತನಗೆರೆ ಗ್ರಾಮದ ಶಂಕರ್ @ ಶಂಕರೇಗೌಡರವರು ದಿನಾಂಕ: 12–09–2007ರಂದು ನ್ಯಾಯಾಲಯದ ಜಾಮೀನಿನ ಮೇಲೆ ಬಿಡುಗಡೆಯಾಗಿ ಬಂದ ನಂತರ ನೀವು ಮುನ್ನೆಚ್ಚರಿಕೆ ಕ್ರಮವಾಗಿ ಕ್ರಮ ಕೈಗೊಳ್ಳದೆ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನವೆಸಗಿರುತ್ತೀರಿ.

2. ನೆಲಮಂಗಲ ಪೊಲೀಸ್ ಠಾಣೆ ಮೊ.ಸಂ. 171/08 ಕಲಂ 324, 307 ಐಪಿಸಿ ಮತ್ತು ಮೊ.ಸಂ. 174/08 ಕಲಂ 506 ಐಪಿಸಿ ಪ್ರಕರಣಗಳು ದಾಖಲಾದ ಬಗ್ಗೆ ಮೇಲಾಧಿಕಾರಿಯವರಿಗೆ ಮಾಹಿತಿಯನ್ನು ತಿಳಿಸಿರುವುದಿಲ್ಲ. ಹಾಗೂ ಪ್ರಕರಣಗಳಲ್ಲಿ ಆರೋಪಿ ಶಂಕರ್ @ ಶಂಕರೇಗೌಡನನ್ನು ದಸ್ತಗಿರಿ ಮಾಡಲು ನೀವು ಯಾವುದೇ ಪ್ರಯತ್ನ ಮಾಡದೇ ಆರೋಪಿಗೆ ನ್ಯಾಯಾಲಯದಿಂದ ನಿರೀಕ್ಷಣಾ ಜಾಮೀನು ನೀಡದಂತೆ ನ್ಯಾಯಾಲಯಕ್ಕೆ ಆಕ್ಷೇಪಣೆಯನ್ನು ಸಲ್ಲಿಸಲು ವಿಫಲರಾಗಿ, ಆರೋಪಿಗೆ ಪರೋಕ್ಷವಾಗಿ ಸಹಾಯ ಮಾಡಿ, ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವೆಸಗಿರುತ್ತೀರಿ.

3. ದಿನಾಂಕ: 28–02–2008ರಂದು ಆರೋಪಿ ಶಂಕರ್ @ ಶಂಕರೇಗೌಡ ರವರ ವಿರುದ್ಧ ಮೊ.ಸಂ. 179/08 ಕಲಂ 107 ಸಿಆರ್‌ಪಿಸಿ ಪ್ರಕರಣ ದಾಖಲಿಸಿದ್ದು, ಆರೋಪಿಯನ್ನು ತಾಲ್ಲೂಕು ದಂಡಾಧಿಕಾರಿಯವರ ಮುಂದೆ ಹಾಜರುಪಡಿಸಲು ಯಾವುದೇ ಪ್ರಯತ್ನ ಮಾಡದೇ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

4. ದಿನಾಂಕ: 11–03–2008ರಂದು ಆರೋಪಿ ಶಂಕರ್ @ ಶಂಕರೇಗೌಡ 2ನೇ ಅಪರ ಜಿಲ್ಲಾ ಸತ್ರ ನ್ಯಾಯಾಲಯದ ಕ್ರಿಮಿನಲ್ ಮಿಸ್ಲೇನಿಯಸ್ ಅರ್ಜಿ 283/08 ಮತ್ತು 284/08ರಲ್ಲಿ ನಿರೀಕ್ಷಣಾ ಜಾಮೀನು ಪಡೆದಿದ್ದು, ನ್ಯಾಯಾಲಯದ ಆದೇಶದಂತೆ ಪ್ರತಿ ಶನಿವಾರ ಮತ್ತು ಭಾನುವಾರ ನೆಲಮಂಗಲ ಪೊಲೀಸ್ ಠಾಣೆಗೆ ಹಾಜರಾಗಿ ಸಹಿ ಮಾಡಬೇಕಾಗಿತ್ತು. ಠಾಣೆಗೆ ಬಂದು ಸಹಿ ಮಾಡದೆ ನ್ಯಾಯಾಲಯದ ಆದೇಶ ಉಲ್ಲಂಘನೆ ಮಾಡಿದ್ದರಿಂದ ಆರೋಪಿಯು ನಿರೀಕ್ಷಣಾ ಜಾಮೀನು ವಜಾಗೊಳಿಸಲು ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುವುದಿಲ್ಲ. ಹಾಗೂ ದಿನಾಂಕ: 05–04–2008ರಂದು ಆರೋಪಿ ಶಂಕರ್ @ ಶಂಕರೇಗೌಡ ರವರು ಪೊಲೀಸ್ ಠಾಣೆಗೆ ಹಾಜರಾದ ಆತನ ವಿರುದ್ಧ ಕಲಂ 107, 151 ಸಿಆರ್‌ಪಿಸಿ ಪ್ರಕಾರ ದಸ್ತಗಿರಿ ಮಾಡಿ ತಾಲ್ಲೂಕು ದಂಡಾಧಿಕಾರಿಯವರ ಮುಂದೆ ಹಾಜರುಪಡಿಸದೇ ಹಾಗೂ ಕಲಂ 110 ಇ ಮತ್ತು ಜಿ ಸಿಆರ್ ಪಿಸಿ ಪ್ರಕರಣವು ಸಹಾ ಕ್ರಮ ಕೈಗೊಳ್ಳದೆ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

5. ಆರೋಪಿ ಶಂಕರ್ @ ಶಂಕರೇಗೌಡ ವಿರುದ್ಧ ಮುಂಜಾಗ್ರತೆ ಸಿಆರ್‌ಪಿಸಿ ಕಲಂಗಳನ್ನು ದಾಖಲಿಸಿ ಕ್ರಮ ಕೈಗೊಂಡಿದ್ದರೆ, ನೆಲಮಂಗಲ ಪೊಲೀಸ್ ಮೊ.ಸಂ: 358/08 ಕಲಂ 143, 147, 148, 341, 302, 379, ಜೊತೆಗೆ 149 ಐಪಿಸಿ ಪ್ರಕರಣದಲ್ಲಿ ದಿನಾಂಕ: 18–04–2008ರಂದು ದೇವರಾಜನ ತಂದೆ ಬೈಲಪ್ಪನನ್ನು ಬೆತ್ತನಗೆರೆ ಗ್ರಾಮದ ಬಳಿ ಶಂಕರ್ ಮತ್ತು ಆತನ ಸಹಚರರು ಸೇರಿ ಬರ್ಬರವಾಗಿ ಕೊಲೆಯಾಗುವುದನ್ನು ತಪ್ಪಿಸಬಹುದಾಗಿತ್ತು. ಈ ಕೊಲೆಗೆ ನಿಮ್ಮ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಕಾರಣವಾಗಿರುತ್ತದೆ.

6. ಆರೋಪಿ ಶಂಕರ್ @ ಶಂಕರೇಗೌಡ ರೌಡಿಶೀಟ್ ತೆರೆಯಲು ನೆಲಮಂಗಲ ಉಪ ವಿಭಾಗ ರವರಿಂದ ದಿನಾಂಕ: 09–03–2008ರಂದು ಅನುಮತಿ ಪಡೆದು ರೌಡಿಶೀಟ್ ತೆರೆದಿದ್ದು, ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ ರವರು ಪೊಲೀಸ್ ಠಾಣೆಗೆ ಭೇಟಿ ನೀಡಿ ಶಂಕರ್ @ ಶಂಕರೇಗೌಡ ರೌಡಿ ಶೀಟನ್ನು ನೋಡಿ "Where is the photograph" ಎಂದು ಬರೆದ ನಂತರ ಆರೋಪಿ ಶಂಕರನ ಫೋಟೋ ಹಚ್ಚಿ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು, ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ದೋಷಾರೋಪಣೆಯ ಆರು (06) ಆರೋಪಗಳ ಪೈಕಿ ಗುರುತರ ಆರೋಪವಾದ ಐದನೇ (05) ಆರೋಪ ಸಾಬೀತಾಗಿಲ್ಲವೆಂದು ಒಪ್ಪಿ, ಉಳಿದ ಆರೋಪಗಳು ಸಾಬೀತಾಗಿದೆಯೆಂದು ತೀರ್ಮಾನಿಸಿದ ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 16–04–2013ರ ಆದೇಶದಲ್ಲಿ ಅರ್ಜಿದಾರರು ಪಿ.ಎಸ್.ಐ. ವೇತನ ಶ್ರೇಣಿಯಲ್ಲಿ ಪ್ರಸ್ತುತ ಪಡೆಯುತ್ತಿರುವ ಮೂಲ ವೇತನವನ್ನು 4 ವರ್ಷದ ಅವಧಿಗೆ ಒಂದು ಹಂತಕ್ಕೆ ಇಳಿಸಿ, ಸದರಿಯವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ 4 ವರ್ಷಗಳ ಕಾಲ ಸಂಚಿತ ಪರಿಣಾಮ ಬೀರದಂತೆ ಮುಂದೂಡಿ, ಇವರ ದಿನಾಂಕ : 19–04–2008ರಿಂದ ದಿನಾಂಕ: 25–06–2008ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21–01–2014ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ. ಮೇಲೆ ಆರು (06) ಆರೋಪಗಳನ್ನು ಹೊರಿಸಿದ್ದು, ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳು ಯಾವುದೇ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಆದರೆ ಶಿಸ್ತು ಪ್ರಾಧಿಕಾರವು, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದೆ ಆ.ಪೊ.ಅ.ಗೆ ನೋಟೀಸ್ ನೀಡಿ, ಸಮಜಾಯಿಷಿಯನ್ನು ಪಡೆದು, ಹೊರಿಸಿದ ಆರು (06) ಆರೋಪಗಳ ಪೈಕಿ ಗುರುತರ ಆರೋಪವಾದ ಐದನೇ (05) ಆರೋಪ ಸಾಬೀತಾಗಿಲ್ಲವೆಂದು ಒಪ್ಪಿ, ಉಳಿದ ಆರೋಪಗಳು ಸಾಬೀತಾಗಿದೆಯೆಂದು ತೀರ್ಮಾನಿಸಿ ದಂಡನೆಯನ್ನು ವಿಧಿಸಿರುತ್ತಾರೆ. ಶಿಸ್ತು ಪ್ರಾಧಿಕಾರಿಗಳು ವಿಧಿಸಿರುವ ಶಿಕ್ಷೆಯ ಪ್ರಮಾಣವು ಆರೋಪಕ್ಕೆ ಅನುಗುಣವಾಗಿರದೇ, ಹೆಚ್ಚಾಗಿರುವುದು ಕಂಡು ಬರುವ ಹಿನ್ನೆಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸುವ ಕುರಿತಂತೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 17 ಪೊಸಿಅ 2014, ಬೆಂಗಳೂರು, ದಿನಾಂಕ: 22ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ವಿರೂಪಾಕ್ಷಸ್ವಾಮಿ, ಪಿಎಸ್ಐ, ಕೇಂದ್ರ ವಲಯ, ಬೆಂಗಳೂರು ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಪರಿಷ್ಕರಿಸಿ ಸದರಿಯವರ ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆ ಹಿಡಿಯುವ ಹಾಗೂ ಸದರಿಯವರು ದಿನಾಂಕ: 19–04–2008ರಿಂದ ದಿನಾಂಕ: 25–06–2008ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

PR 611

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಹೆಚ್. ಶಿವಶೇಖರ್, ಶಾಖಾಧಿಕಾರಿ, ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ ಇವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಒಇ 41 ಪೊಸಇ 2013(ಭಾ–1) ಬೆಂಗಳೂರು, ದಿನಾಂಕ: 26–06–2014

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಸರ್ಕಾರವು ಶ್ರೀ ಎಸ್.ಹೆಚ್. ಶಿವಶೇಖರ್, ನಿವೃತ್ತ ಶಾಖಾಧಿಕಾರಿ, ಕರ್ನಾಟಕ ಉಚ್ಚ ನ್ಯಾಯಾಲಯ ಇವರನ್ನು ದಿನಾಂಕ: 02–09–2013ರಿಂದ ಜಾರಿಗೆ ಬರುವಂತೆ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಶಾಖಾಧಿಕಾರಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ಕೆಸಿಎಸ್ಆರ್ ನಿಯಮ 313ರನ್ವಯ ಪುನರ್ ನೇಮಕ ಮಾಡಿ ಆದೇಶಿಸಿ ಇವರ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು ಎಂದು ತಿಳಿಸಲಾಗಿತ್ತು. ಈಗ ಸದರಿಯವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಅಗತ್ಯವಿದ್ದು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 41 ಪೊಸಇ 2013 (ಭಾ–3), ಬೆಂಗಳೂರು, ದಿನಾಂಕ: 25ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಶ್ರೀ ಎಸ್.ಹೆಚ್. ಶಿವಶೇಖರ್, ಶಾಖಾಧಿಕಾರಿ, ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ ರವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲಾಗಿದೆ.

ಸೇವಾ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತಿವೆ :–

1. ಶ್ರೀ ಎಸ್. ಹೆಚ್. ಶಿವಶೇಖರ್ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 02–09–2013ರಿಂದ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಗೌರವಾನ್ವಿತ ಅಧ್ಯಕ್ಷರಾದ ನ್ಯಾಯಮೂರ್ತಿ ಶ್ರೀ ಎಂ.ಪಿ. ಚಿನ್ನಪ್ಪ ಇವರ ಅಧಿಕಾರವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಎಸ್.ಹೆಚ್. ಶಿವಶೇಖರ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 10,397–00 ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಕಾಲ್ಪನಿಕ ಮೂಲ ವೇತನವಾದ ರೂ. 23,400/–ಗಳಿಗೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು,
10. 1966ರ ಕರ್ನಾಟಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟು ಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿ ಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50–00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೇಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

PR 612

## ಒಳಾಡಳಿತ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಒಇ 379 ಪಿಎಂಎಸ್ 2014, ಬೆಂಗಳೂರು, ದಿನಾಂಕ: 14ನೇ ಜುಲೈ, 2014**

ದಿನಾಂಕ: 29–05–2013ರ ಸುತ್ತೋಲೆ ಸಂಖ್ಯೆ: ಒಇ 357 ಪಿಎಂಎಸ್ 2009ರಲ್ಲಿ ರಾಜ್ಯದಲ್ಲಿ ನೆಲೆಸಿರುವ ಟಿಬೆಟ್ ನಿರಾಶ್ರಿತರ NORI ಅರ್ಜಿಯನ್ನು ಸಂಬಂಧಪಟ್ಟ ಜಿಲ್ಲಾ ಪೊಲೀಸ್ ಅಧೀಕ್ಷಕರುಗಳಿಗೆ ನೇರವಾಗಿ ಸಲ್ಲಿಸುವಂತೆ ಸೂಚಿಸಲಾಗಿದೆ.

ಮುಂದುವರೆದು, ರಾಜ್ಯದಲ್ಲಿ ವಿವಿಧ ವಿದ್ಯಾಭ್ಯಾಸ/ಉದ್ಯೋಗದಲ್ಲಿ ನಿರತರಾಗಿರುವ ವಿದೇಶೀ ರಾಷ್ಟ್ರೀಯರು ಉನ್ನತ ವ್ಯಾಸಂಗ/ಉದ್ಯೋಗಕ್ಕಾಗಿ ತೆರಳುವ ಮುನ್ನ ರಾಜ್ಯ ಸರ್ಕಾರದಿಂದ ಪೊಲೀಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ ಪಡೆಯಲು ಸರ್ಕಾರಕ್ಕೆ ಅರ್ಜಿ ಸಲ್ಲಿಸಿ, ನಂತರ ಪ್ರಮಾಣ ಪತ್ರ ಪಡೆಯಲು ಉಂಟಾಗುತ್ತಿರುವ ವಿಳಂಬವನ್ನು ತಪ್ಪಿಸುವ ದೃಷ್ಟಿಯಿಂದ ಇನ್ನು ಮುಂದೆ ವಿದೇಶೀ ರಾಷ್ಟ್ರೀಯರು Police Clearance certificate ಪಡೆಯಲು ಸಮಗ್ರ ದಾಖಲೆಗಳನ್ನೊಳಗೊಂಡ ಅರ್ಜಿಯನ್ನು ತಮ್ಮ ವ್ಯಾಪ್ತಿಯಲ್ಲಿರುವ ಪೊಲೀಸ್ ಆಯುಕ್ತರು/ಜಿಲ್ಲಾ ಪೊಲೀಸ್ ಅಧೀಕ್ಷಕರಿಗೆ ನೇರವಾಗಿ ಸಲ್ಲಿಸುವಂತೆ ಈ ಮೂಲಕ ಸೂಚಿಸಲಾಗಿದೆ.

ಪೊಲೀಸ್ ಆಯುಕ್ತರು/ಜಿಲ್ಲಾ ಪೊಲೀಸ್ ಅಧೀಕ್ಷಕರು ಅರ್ಜಿಯನ್ನು ನಿಯಮಾನುಸಾರ ಪರಿಶೀಲಿಸಿ ರಾಜ್ಯ ವಿದೇಶಿಯರ ನೋಂದಣಾಧಿಕಾರಿಗಳ ಮುಖಾಂತರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಮಾರ್ಗಸೂಚಿಯು ತಕ್ಷಣದಿಂದ ಜಾರಿಯಲ್ಲಿ ಬರುವುದು.

**ಪ್ರಕಾಶ್ ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ರಹದಾರಿ ಮತ್ತು ವಿದೇಶಿಯರು)

PR 613
SC 25

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 251 ಸಅಸೇ 2013: ದಿನಾಂಕ:16.05.2013.
2. ಸರ್ಕಾರದ ಕಾರ್ಯದರ್ಶಿ (ಆಡಳಿತ ಸುಧಾರಣೆ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ರವರ ಅ.ಟಿ. ಸಂಖ್ಯೆ: ಸಿಆಸುಇ/76/ಪ್ರಕಾ(ಆಸು)/2014, ದಿನಾಂಕ:04.03.2014.

**ಪ್ರಸ್ತಾವನೆ :**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ)ಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ವರ್ಷದಿಂದ ವರ್ಷಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ:01.04.2013 ರಿಂದ ದಿನಾಂಕ:31.03.2014 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)ಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:01.04.2014 ರಿಂದ ದಿನಾಂಕ:31.03.2015ರವರೆಗೆ ಮುಂದುವರಿಸಲು ಕೋರಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–1/ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ) ಹಿರಿಯ ಶೀಘ್ರಲಿಪಿಗಾರರು ಶೀಘ್ರಲಿಪಿಗಾರರು | 3 |
| 2 | ಭಾಷಾಂತರಕಾರರು(ಶಾಖಾಧಿಕಾರಿ/ಹಿರಿಯ ಸಹಾಯಕರು) | 1 |
| 3 | ಸಹಾಯಕರು/ಕಿರಿಯ ಸಹಾಯಕರು | 1 |
| 4 | ವಾಹನ ಚಾಲಕರು | 1 |
| 5 | ಗ್ರೂಪ್–ಡಿ ಹುದ್ದೆ (ಜಮೇದಾರ/ದಲಾಯತ) | 2 |

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 177 ಸಉಸೇ 2014 ಬೆಂಗಳೂರು, ದಿನಾಂಕ:28ನೇ ಜೂನ್, 2014.**

**ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ** (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:01.04.2014 ರಿಂದ ದಿನಾಂಕ:31.03.2015 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–1/ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕರು) | **1** |
| 2 | ಹಿರಿಯ ಶೀಘ್ರಲಿಪಿಗಾರರು/ಶೀಘ್ರಲಿಪಿಗಾರರು | **2** |
| 3 | ಭಾಷಾಂತರಕಾರರು(ಶಾಖಾಧಿಕಾರಿ/ಹಿರಿಯ ಸಹಾಯಕರು) | 1 |
| 4 | ಸಹಾಯಕರು/ಕಿರಿಯ ಸಹಾಯಕರು | 1 |
| 5 | ವಾಹನ ಚಾಲಕರು | 1 |
| 6 | ಗ್ರೂಪ್–ಡಿ ಹುದ್ದೆ (ಜಮೇದಾರ/ದಲಾಯತ) | 2 |

**ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ** 96, ದಿನಾಂಕ: 10.07.1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 592**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 138 ಸಅಸೇ 2009: ದಿನಾಂಕ:30.03.2009.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 602 ಸಅಸೇ 2011; ದಿನಾಂಕ:16.04.2012.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 241 ಸಅಸೇ 2013; ದಿನಾಂಕ:17.04.2013.
4. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಕಡತ ಸಂಖ್ಯೆ: ಐಟಿಡಿ 11 ಡಿಐಎಸ್ 2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಹಾಗೂ ಒಟ್ಟು 16 ಪೂರಕ ಸಿಬ್ಬಂದಿಯ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿರುತ್ತದೆ. ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.2013 ರಿಂದ 31.03.2014 ರವರೆಗೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಕಡತದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:01.04.2014 ರಿಂದ ಮೂರು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸುವಂತೆ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಕೋರಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2 | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3 | ಉಪ ಕಾರ್ಯದರ್ಶಿ | 1 ಹುದ್ದೆ |
| 4 | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5 | ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ | 1 ಹುದ್ದೆ |
| 6 | ಶಾಖಾಧಿಕಾರಿ | 1 ಹುದ್ದೆ |
| 7 | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8 | ಹಿರಿಯ ಸಹಾಯಕರು/ ಶೀಘ್ರಲಿಪಿಗಾರರು | 3 ಹುದ್ದೆಗಳು |
| 9 | ಕಿರಿಯ ಸಹಾಯಕರು | 1 ಹುದ್ದೆ |
| 10 | ದಲಾಯತ್ | 3 ಹುದ್ದೆಗಳು |
| 11 | ಚಾಲಕರು | 2 ಹುದ್ದೆಗಳು |
| | ಒಟ್ಟು | 16 ಹುದ್ದೆಗಳು |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 210 ಸಉಸೇ 2014, ಬೆಂಗಳೂರು, ದಿನಾಂಕ:10ನೇ ಜುಲೈ,2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:01.04.2014 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2 | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3 | ಉಪ ಕಾರ್ಯದರ್ಶಿ | 1 ಹುದ್ದೆ |
| 4 | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5 | ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ | 1 ಹುದ್ದೆ |
| 6 | ಶಾಖಾಧಿಕಾರಿ | 1 ಹುದ್ದೆ |
| 7 | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8 | ಹಿರಿಯ ಸಹಾಯಕರು/ ಶೀಘ್ರಲಿಪಿಗಾರರು | 3 ಹುದ್ದೆಗಳು |
| 9 | ಕಿರಿಯ ಸಹಾಯಕರು | 1 ಹುದ್ದೆ |
| 10 | ದಲಾಯತ್ | 3 ಹುದ್ದೆಗಳು |
| 11 | ಚಾಲಕರು | 2 ಹುದ್ದೆಗಳು |
| | **ಒಟ್ಟು** | **16 ಹುದ್ದೆಗಳು** |

**ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ** 96, ದಿನಾಂಕ: 10.07.1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ **ಮತ್ತು ಅವರ ಹೆಸರಿನಲ್ಲಿ,**

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

**PR. 593**

## PERSONNEL AND ADMINISTRATIVE REFORMS SECRETRIAT

**Subject:** Departmental Enquiry against Sri H.S. Venkatesh, IPS, the then Superintendent of Police, Davanagere Dist., Davanagere-reg.

**Read:**

1. Un Official Note dated: 11.04.2011 of the Principal Secretary to Government, Home Department.
2. Letter dated: 12.10.2011 of the DG & IGP, Karnataka, Bangalore.
3. Notice under Rule 8 of the All India Services (Discipline and Appeal) Rules, 1969, dated: 18.02.2012 issued to Sri H.S. Venkatesh, IPS.
4. Written Statement dated: 19.07.2012 by Sri H.S. Venkatesh, IPS.
5. Government Order No: DPAR 203 SPS 2011, dated: 31.07.2012.
6. Letter dated: 04.02.2013 of the DG & IGP, Karnataka, Bangalore.
7. Government Order No: DPAR 203 SPS 2011, dated: 04.03.2013.
8. Enquiry Report No: HePoKa/ Aadalitha/DeEe/ 1/2013, dated: 27.01.2014.

**Preamble:**

Sri H.S. Venkatesh, IPS (KN-2001) was working as Superintendent of Police, Davanagere District, Davanagere during the year 2011. Along with the U.O. Note read at (1) above, the Principal Secretary to Government, Home Department forwarded a Report dated: 01.03.2011, which was filed by the Inspector General of Police, Eastern Range, Davanagere against Sri H.S. Venkatesh, IPS with a request to transfer him from the post of Superintendent of Police, Davanagere District, Davanagere and to take necessary action to conduct Disciplinary Action against him. The Report dated: 01.03.2011 filed by the Inspector General of Police, Eastern Range, Davanagere is based on complaint dated: 22.02.2011 by Smt Anitha Haddannavar. the then DySP, Harapanahalli Sub-division, Davanagere District. The DG & IGP,Karnataka State, Bangalore in his letter read at (2) above. has recommended appropriate Disciplinary Action against Sri H.S. Venkatesh, IPS. Based on the recommendation, after obtaining the approval of Competent Authority Notice under Rule 8 of the All India Services (Discipline and Appeal) Rules, 1969, was issued to Sri H.S. Venkatesh, IPS on 18.02.2012. Following are the charges made against him:

1. You, Sri H.S. Venkatesh, IPS working as Superintendent of Police, Davanagere District have misused your official powers by calling your sub-ordinate Smt. Anitha Haddannavar, the then DySP, Davanagere Sub-division over telephone at odd hours intentionally to harass her.

2. You have also been rude to her and also addressed her in singular language, which shows your mis-behaviour with your sub-ordinate officers.

3. You have instructed Smt. Anitha Haddannavar to call at midnight to discuss about non-heinous cases and also used obscene language related to the cases at such odd hours.

4. On 11.02.2011, you intentionally made Smt. Anitha Haddannavar to stand before you for more than one hour when she asked for leave.

Sri H.S. Venkatesh, IPS submitted his Written Statement of Defence on 19.07.2012, read at (4) above. After careful examination of the Written Statement of Defence the Government took a view that reply of the officer was not convincing and not acceptable. Hence, it was considered necessary to enquire in to the charges levelled against the officer by holding regular Departmental Enquiry under the provisions of AIS (D&A) Rules, 1969. In the Government Order dated: 31.07.2012, read at (5) above, Sri Kamal Pant, IPS (KN-1990) was appointed as Enquiry Officer and Sri Amrit Paul, IPS (KN-1995) was appointed as Presenting Officer. But in the letter dated: 04.02.2013, read at (6) above, the DG & IGP recommended to change Sri Kamal Pant, IPS as Enquiry Officer citing few technical reasons. Accordingly in the Government Order dated: 04.03.2013, read at (7) above, Sri Prashant Kumar Thakur, IPS (KN-1992) was appointed as Enquiry Officer in the place of Sri Kamal Pant, IPS. Sri Prashant Kumar Thakur, IPS has submitted his Enquiry Report along with the letter dated: 27.01.2014, read at (8) above.

The Enquiry Officer has verified each charge made against Sri H.S. Venkatesh, IPS in detail and has found out that the phone calls made to Smt. Anitha Haddannavar or orders given to her were well within the purview of duty and responsibilities of a Superintendent of Police as mentioned in Police Manual. He has mentioned Order No. 153 in Police Manual Part: 1 and Order No. 1378(2) in Police Manual Part:2, in particular. With regard to some charges it was found that there are no other witnesses except the statement of Smt. Anitha Haddannavar. There is no circumstantial evidence or supporting documents available. In view of all this the Enquiry Officer has concluded that all the charges made against Sri H.S. Venkatesh, IPS have not been proved. On going through the Report of the Enquiry Officer, the Government have accepted the logical conclusions reached by him.

Hence, the following order.

**GOVERNMENT ORDER NO. DPAR 203 SPS 2011, BANGALORE, DATED: 28.05.2014.**

Having regard to the circumstances explained in the preamble, the Government have accepted the Enquiry Report submitted by the Enquiry Officer and exonerates Sri H.S. Venkatesh, IPS (KN-2001) of the charges levelled against him in the Enquiry ordered in the Government Order dated: 31.07.2012 read above.

By Order and in the name of the Governor of Karnataka

**J.D.Madhuchandra Tejaswi**

Under Secretary to Government,

DP & AR (Services-IV)

**PR. 594**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ. ಜಯಚಂದ್ರ, ನಿವೃತ್ತ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಡಿ.ಜಿ. ಪಟಗಾರ್, ಶಾಖಾಧಿಕಾರಿ ಇವರುಗಳ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂಖ್ಯೆ ಸಿಆಸುಇ 12 ಸೇಇವಿ 2011, ದಿನಾಂಕ 22.10.2011.
2. ಆರೋಪಿತ ಅಧಿಕಾರಿಗಳು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆ ದಿನಾಂಕ 5.11.2011.

**ಪ್ರಸ್ತಾವನೆ :**

ಅಕ್ರಮ ಗಣಿಗಾರಿಕೆಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತರ ತನಿಖಾ ವರದಿಯ ಭಾಗ–2ರ ಶಿಫಾರಸ್ಸಿನನ್ವಯ ಶ್ರೀ.ಕೆ. ಜಯಚಂದ್ರ, ನಿವೃತ್ತ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಡಿ.ಜಿ. ಪಟಗಾರ್, ಶಾಖಾಧಿಕಾರಿ (ಹಿಂದಿನ ಹಿರಿಯ ಸಹಾಯಕ) ಇವರುಗಳು ಈ ಹಿಂದೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದರೆನ್ನಲಾಗಿರುವ ಈ ಕೆಳಕಂಡ ಎರಡು ಆರೋಪಗಳ ಬಗ್ಗೆ ಕ್ರಮ ಜರುಗಿಸುವಂತೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯು ಕೋರಿದ್ದ ಹಿನ್ನೆಲೆಯಲ್ಲಿ ಮೇಲೆ ಓದಲಾದ (1)ರ ನೋಟೀಸ್‌ನಲ್ಲಿ ಆರೋಪಿತ ಅಧಿಕಾರಿಗಳಿಗೆ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11 ಮತ್ತು ಕ.ನಾ.ಸೇ. ನಿಯಮಾವಳಿಗಳು 1958ರ ನಿಯಮ 2(14)(ಬಿ) ರಡಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿರುತ್ತದೆ ಃ

1) ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಎಸ್.ಇ.ಬಿ. ರೇಂಜ್‌ನ ಜೋಗ್ ತಿಮ್ಮಪ್ಪನಗುಡಿ ಗ್ರಾಮದ 550 ಎಕರೆ ಪ್ರದೇಶದಲ್ಲಿ ಗಣಿ ಗುತ್ತಿಗೆಯನ್ನು ಮೆ।। ಶ್ರೀ ಸಾಯಿ ವೆಂಕಟೇಶ್ವರ ಮಿನರಲ್ಸ್ ಇವರಿಗೆ ಮಂಜೂರು ಮಾಡುವ ಸಂದರ್ಭದಲ್ಲಿ ಸಂಬಂಧಪಟ್ಟ ಕಡತದಲ್ಲಿ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಯವರ ಆದೇಶದನ್ವಯ ಕೇಂದ್ರ ಸರ್ಕಾರದ ಗಣಿ ಮಂತ್ರಾಲಯಕ್ಕೆ ಪ್ರಸ್ತಾವನೆಯನ್ನು ಕಳುಹಿಸಲು ಕರಡು ಪತ್ರವನ್ನು ಮಂಡಿಸಿದ್ದು, ಸದರಿ ಪತ್ರ ಕಡತದಲ್ಲಿ ಅನುಮೋದನೆ ಆಗದಿದ್ದಾಗ್ಯೂ ಸಹ ಕೇಂದ್ರ ಸರ್ಕಾರದ ಗಣಿ ಮಂತ್ರಾಲಯಕ್ಕೆ ಪ್ರಸ್ತಾವನೆ ರಾಜ್ಯ ಸರ್ಕಾರದಿಂದ ಸ್ವೀಕೃತವಾಗಿರುವುದು ದೃಢಪಟ್ಟಿರುವುದು.
2) ಮೆ।। ಶ್ರೀ ಸಾಯಿ ವೆಂಕಟೇಶ್ವರ ಮಿನರಲ್ಸ್ ಎಂಬ **Firm** ಹೆಸರಿನ ಪಕ್ಕದಲ್ಲಿ **Proprietor** ಶ್ರೀ ವಿನೋದ್ ಗೋಯೆಲ್ ಎಂಬ ಹೆಸರನ್ನು ಅಕ್ರಮವಾಗಿ ಸೇರಿಸಿ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರಿಗೆ ಹೆಚ್ಚಿನ ಮಾಹಿತಿಯನ್ನು ಕೇಳಿರುವುದು.

ಈ ಬಗ್ಗೆ ಆರೋಪಿತ ಅಧಿಕಾರಿಗಳು ಮೇಲೆ ಓದಲಾದ (2)ರಲ್ಲಿ ತಮ್ಮ ಪ್ರತಿರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿದ್ದು, ತಮ್ಮ ಹೇಳಿಕೆಯಲ್ಲಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿದ್ದು, ಮೆ: ಶ್ರೀ ಸಾಯಿ ವೆಂಕಟೇಶ್ವರ ಮಿನರಲ್ಸ್ ಇವರಿಗೆ ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಜೋಗ್ ತಿಮ್ಮಪ್ಪನಗುಡಿ ಗ್ರಾಮದ 550 ಎಕರೆ ಪ್ರದೇಶದಲ್ಲಿ ಗಣಿ ಗುತ್ತಿಗೆಯನ್ನು ಎಂ.ಸಿ.ಆರ್.ಎಸ್ ನಿಯಮ 1960ರ ನಿಯಮ 59(1)(a) ನ್ನು ಸಡಿಲಿಸಿ ಮಂಜೂರು ಮಾಡುವ ಬಗ್ಗೆ ದಿನಾಂಕ: 8.10.2007ರಂದು ಕೇಂದ್ರ ಸರ್ಕಾರಕ್ಕೆ ಕಳುಹಿಸಲು ಕರಡು ಪತ್ರವನ್ನು ಕಡತದಲ್ಲಿ ಮಂಡಿಸಿದ್ದು, ಸದರಿ ಕರಡು ಪತ್ರವು ಅನುಮೋದನೆಯಾಗದ ಹಿನ್ನೆಲೆಯಲ್ಲಿ ಸದರಿ ಪತ್ರದ ಮೇಲೆ "Not to issue" ಎಂದು ಬರೆಯಲಾಗಿರುತ್ತದೆ ಆದಾಗ್ಯೂ ಸದರಿ ಪತ್ರವು 02 ವರ್ಷಗಳ ನಂತರ ಅಂದರೆ ದಿನಾಂಕ: 27.11.2009 ರಂದು ಕೇಂದ್ರ ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿ ಸ್ವೀಕೃತವಾಗಿದ್ದು, ಈ ಪತ್ರವು ಫೋರ್ಜರಿಯಾಗಿದ್ದು, ಶ್ರೀ ವಿನೋದ್ ಗೋಯೆಲ್ ಎಂಬ ವ್ಯಕ್ತಿಯೇ 9.10.2007ರ ದಿನಾಂಕವನ್ನು ನಮೂದಿಸಿ ಫೋರ್ಜರಿಯಾಗಿ ಸರ್ಕಾರದ ಪತ್ರವನ್ನು ಕೇಂದ್ರ ಸರ್ಕಾರಕ್ಕೆ ಬರೆದಿರಬಹುದೆಂದು ತಮಗೆ ಅನುಮಾನವಿದೆಯೆಂದು ತಿಳಿಸಿರುತ್ತಾರೆ. ಆದರೆ ತಮ್ಮ ಹೇಳಿಕೆಯನ್ನು ಸಮರ್ಥಿಸುವಂತಹ ಯಾವುದೇ ಸಮರ್ಥನೀಯವಾದ ದಾಖಲೆ ಅಥವಾ ಸಾಕ್ಷಿಯನ್ನು ಒದಗಿಸಿರುವುದಿಲ್ಲ.

ಆದ್ದರಿಂದ ಆರೋಪಿತ ಅಧಿಕಾರಿಗಳ ಪ್ರತಿರಕ್ಷಣಾ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ಹಾಗೂ ಇದೊಂದು ಗಂಭೀರ ಸ್ವರೂಪದ ಪ್ರಕರಣವಾಗಿರುವುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಇಲಾಖಾ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 12 ಸೇಇವಿ 2011 ಬೆಂಗಳೂರು ದಿನಾಂಕ 07ನೇ ಜುಲೈ 2014.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11–'ಎ'ರೊಡನೆ ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರವು ಶ್ರೀ ಕೆ. ಜಯಚಂದ್ರ, ನಿವೃತ್ತ ಅಧೀನ ಕಾರ್ಯದರ್ಶಿ ಶ್ರೀ ಡಿ.ಜಿ. ಪಟಗಾರ್, ಶಾಖಾಧಿಕಾರಿ (ಹಿಂದಿನ ಹಿರಿಯ ಸಹಾಯಕ) ಇವರುಗಳು ಈ ಹಿಂದೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದರೆನ್ನಲಾಗಿರುವ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ವಿ.ಪಿ. ಜಹಗೀರ್‌ದಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ರಾಜರಾಜೇಶ್ವರಿನಗರ, ಬೆಂಗಳೂರು ಇವರನ್ನು ಪ್ರಕರಣದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11(5)(ಸಿ) ರನ್ವಯ ಸರ್ಕಾರದ ಉಪಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಗಣಿ) ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಯವರಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿ ಒದಗಿಸಲು ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ಗಣಿ) ಇವರು ಕ್ರಮ ಕೈಗೊಳ್ಳತಕ್ಕದ್ದು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ಸಂಚಿತ ಸಂಭಾವನೆಯನ್ನು ಹಾಗೂ ಮಂಡನಾಧಿಕಾರಿಯವರು ನಿಯಮಾನುಸಾರ ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆಂದು ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಬಗ್ಗೆ ಸ್ಪಷ್ಟ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

**PR. 595**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್ಇಎಂ 96; ದಿನಾಂಕ: 19-02-1997.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 98; ದಿನಾಂಕ: 24-04-1998.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 93 ಸಅಸೇ 2012; ದಿನಾಂಕ: 29-03-2012.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 178 ಸಅಸೇ 2013; ದಿನಾಂಕ: 22-05-2013.
5. ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 01 ಯೋಮೇಘ 2014.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1) ಮತ್ತು (2) ರಲ್ಲಿ ಓದಲಾಗಿರುವ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಈ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಿಕೊಂಡು ಬರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ/ಉಪ ಕಾರ್ಯದರ್ಶಿ | 01 |
| 2 | ಶೀಘ್ರಲಿಪಿಗಾರರು | 01 |
| 3 | ಕಿರಿಯ ಸಹಾಯಕರು | 01 |
| 4 | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 01 |
| 5 | ಸಹಾಯಕ ನಿರ್ದೇಶಕರು /ಉಪ ನಿರ್ದೇಶಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |
| 6 | ಪ್ರೋಗ್ರಾಮರ್ | 01 |
| 7 | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 01 |
| 8 | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು*/ ಸಹ ನಿರ್ದೇಶಕರು/ ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ. (ವೇತನ ಶ್ರೇಣಿ ರಹಿತ ಹುದ್ದೆ) | 02 |
| 9 | ಶಾಖಾಧಿಕಾರಿ | 01 |
| 10 | ಹಿರಿಯ ಸಹಾಯಕರು | 01 |
| 11 | ಶೀಘ್ರಲಿಪಿಗಾರರು | 01 |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 12 | ಬೆರಳಚ್ಚುಗಾರರು | 01 |
| 13 | ಟೆಕ್ನಿಷಿಯನ್ (ಗ್ರೂಪ್-ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 01 |
| 14 | ವಾಹನ ಚಾಲಕ | 01 |
| 15 | ಡಾಟಾ ಎಂಟ್ರಿ ಆಪರೇಟರ್ | 01 |
| 16 | ಹಿರಿಯ ಸಹಾಯಕ | 01 |
| 17 | ಸಹಾಯಕ | 01 |
| 18 | ಕಿರಿಯ ಸಹಾಯಕ | 01 |
| | ಒಟ್ಟು | 19 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿನ ಮೇಲ್ವಿಚಾರಣಾ ಘಟಕದಲ್ಲಿನ ಎಲ್ಲಾ ಹುದ್ದೆಗಳನ್ನು ದಿನಾಂಕ: 19.02.2013 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳ ಅವಧಿಯ ಮುಂದುವರಿಕೆಯು ದಿನಾಂಕ: 18.02.2014 ರಂದು ಮುಕ್ತಾಯವಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಕಡತದಲ್ಲಿ ಆರ್ಥಿಕ ಇಲಾಖೆಯು ಈ ತಾತ್ಕಾಲಿಕ ಹುದ್ದೆಗಳನ್ನು ಶಾಶ್ವತವಾಗಿ ಮುಂದುವರಿಸುವಂತೆ ಆರ್ಥಿಕ ಇಲಾಖೆಯ ಮೇಲ್ವಿಚಾರಣಾ ಘಟಕದ ಕಡತ ಸಂಖ್ಯೆ: ಆಇ 24/ಯೋಮೇಘ/2012ರಲ್ಲಿ ಕೋರಿದ್ದು, ಹುದ್ದೆಗಳನ್ನು ಖಾಯಂಗೊಳಿಸಲು ಸಿ.ಆ.ಸು.ಇ.(ಆಡಳಿತ ಸುಧಾರಣೆ)ಯಿಂದ ಕಾರ್ಯಾಧ್ಯಯನ ವರದಿಯನ್ನು ನಿರೀಕ್ಷಿಸಲಾಗಿದೆ. ಹಾಗೂ ಸದ್ಯಕ್ಕೆ ಸದರಿ ಹುದ್ದೆಗಳನ್ನು ದಿನಾಂಕ: 19.02.2014 ರಿಂದ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 105 ಸಲುಸೇ 2014, ಬೆಂಗಳೂರು, ದಿನಾಂಕ: 07ನೇ ಜುಲೈ, 2014.**

**ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:19.02.2014 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1<br>2<br>3 | ಜಂಟಿ/ಉಪ ಕಾರ್ಯದರ್ಶಿ<br>ಶೀಘ್ರಲಿಪಿಗಾರರು<br>ಕಿರಿಯ ಸಹಾಯಕರು | 01<br>01<br>01 |
| 4 | ಅಕೌಂಟ್ಸ್ ಆಫೀಸರ್<br>(ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ನಿಯೋಜಿಸುವುದು)<br>(ವೇತನ ಶ್ರೇಣಿ ರಹಿತ ಹುದ್ದೆ) | 01 |
| 5 | ಸಹಾಯಕ ನಿರ್ದೇಶಕರು /ಉಪ ನಿರ್ದೇಶಕರು<br>(ವೇತನ ಶ್ರೇಣಿ ರಹಿತ ಹುದ್ದೆ) | 01 |
| 6 | ಪ್ರೋಗ್ರಾಮರ್ | 01 |
| 7 | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 01 |
| 8 | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು*/ ಸಹ ನಿರ್ದೇಶಕರು/ ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ. (ವೇತನ ಶ್ರೇಣಿ ರಹಿತ ಹುದ್ದೆ) | 02 |
| 9 | ಶಾಖಾಧಿಕಾರಿ | 01 |
| 10 | ಹಿರಿಯ ಸಹಾಯಕರು | 01 |
| 11 | ಶೀಘ್ರಲಿಪಿಗಾರರು | 01 |
| 12 | ಬೆರಳಚ್ಚುಗಾರರು | 01 |
| 13 | ಟೆಕ್ನಿಷಿಯನ್ (ಗ್ರೂಪ್-ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 01 |
| 14 | ವಾಹನ ಚಾಲಕ | 01 |
| 15 | ಡಾಟಾ ಎಂಟ್ರಿ ಆಪರೇಟರ್ | 01 |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 16 | ಹಿರಿಯ ಸಹಾಯಕ | 01 |
| 17 | ಸಹಾಯಕ | 01 |
| 18 | ಕಿರಿಯ ಸಹಾಯಕ | 01 |
| | **ಒಟ್ಟು** | **19 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 596**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀಮತಿ ಎನ್. ಶಾರದಾಂಬ, ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಕಾನೂನು ಕೋಶ),ಕರ್ನಾಟಕ ಸರ್ಕಾರ ಸಚಿವಾಲಯ ಇವರಿಗೆ ಅಧೀನ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿರುವುದನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ ಸಿಆಸುಇ 52 ಸಅಸೇ 2012, ದಿನಾಂಕ: 31.12.2012.
2) ಯೋಜನಾ ಇಲಾಖೆಯ ಕಡತ ಸಂಖ್ಯೆ ಪಿಡಿ 177 ಎಸ್‌ಎಸ್‌ಎಂ 2012.
3) ನೋಟೀಸ್ ಸಂಖ್ಯೆ ಪಿಡಿ 170 ಎಸ್‌ಎಸ್‌ಎಂ 2006. ದಿನಾಂಕ: 27.12.2006
4) ನೋಟೀಸ್ ಸಂಖ್ಯೆ ಸಿಆಸುಇ 5 ಸೇಇವಿ 2013, ದಿನಾಂಕ: 20.2.2014.
5) ಶ್ರೀಮತಿ ಎನ್. ಶಾರದಾಂಬ ಇವರು ನೋಟೀಸ್‌ಗೆ ನೀಡಿರುವ ಉತ್ತರ ದಿನಾಂಕ: 23.5.2014.

**ಪ್ರಸ್ತಾವನೆ:**

ಶ್ರೀಮತಿ ಎನ್. ಶಾರದಾಂಬ ಇವರಿಗೆ ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಶಾಖಾಧಿಕಾರಿ ವೃಂದದಿಂದ ಅಧೀನ ಕಾರ್ಯದರ್ಶಿ ವೃಂದಕ್ಕೆ ಮುಂಬಡ್ತಿ ನೀಡಿ ಆದೇಶಿಸಲಾಗಿತ್ತು. ಯೋಜನಾ ಇಲಾಖೆಯು ಮೇಲೆ ಓದಲಾದ (2)ರ ಕಡತದಲ್ಲಿ ಶ್ರೀಮತಿ ಎನ್. ಶಾರದಾಂಬ ಇವರು ಈ ಹಿಂದೆ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ಹಿರಿಯ ಸಹಾಯಕ ವೃಂದದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ದಿನಾಂಕ: 27.12.2006ರ ನೋಟೀಸ್ ಸಂಖ್ಯೆ ಪಿಡಿ 170 ಎಸ್‌ಎಸ್‌ಎಂ 2006 ರಲ್ಲಿ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11(1)(ಎ) ಅನ್ವಯ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ ಆದೇಶಿಸಿದ್ದು. ಈ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿದ್ದು, ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿ ಆರೋಪಿತ ನೌಕರರ ವಿರುದ್ಧದ ಎಲ್ಲಾ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುತ್ತವೆ ಎಂದು ನಿರ್ಣಯಿಸಿ, ಸರ್ಕಾರಕ್ಕೆ ವರದಿ ನೀಡಿರುತ್ತಾರೆ ಎಂದು ತಿಳಿಸಿರುತ್ತದೆ.

ಮುಂದುವರೆದು ಪ್ರಸ್ತುತ ಆರೋಪಿತ ನೌಕರರು ಅಧೀನ ಕಾರ್ಯದರ್ಶಿ ವೃಂದದಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ವಿಚಾರಣಾ ವರದಿಯನ್ನು ಜಾರಿಗೊಳಿಸುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳುವಂತೆ ಕೋರಿ ಕಡತವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ದಿನಾಂಕ: 5.3.2013ರಂದು ಕಳುಹಿಸಿರುತ್ತಾರೆ.

ಶ್ರೀಮತಿ ಎನ್. ಶಾರದಾಂಬ ಇವರಿಗೆ ದಿನಾಂಕ: 27.12.2006ರಂದೇ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ವಿಚಾರಣಾಧಿಕಾರಿಯವರು ದಿನಾಂಕ: 1.2.2010ರಂದೇ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಗೆ ಸದರಿಯವರ ವಿರುದ್ಧದ ಎಲ್ಲಾ ಆರೋಪವು ಸಾಬೀತಾಗಿರುವುದೆಂದು ನಿರ್ಣಯಿಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದರೂ ಸಹ ಈ ಅಂಶಗಳನ್ನು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಗಮನಕ್ಕೆ ತರದೇ ಇದ್ದುದರಿಂದ ಸದರಿಯವರು ಶಾಖಾಧಿಕಾರಿ ಮತ್ತು ಅಧೀನ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ಹೊಂದಲು ಕಾರಣವಾಗಿರುತ್ತದೆ.

ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆ ಎದುರಿಸುತ್ತಿರುವ ಸರ್ಕಾರಿ ನೌಕರರುಗಳನ್ನು ಮುಂಬಡ್ತಿಗೆ ಪರಿಗಣಿಸಿದಾಗ, ಅನುಸರಿಸಬೇಕಾದ ಕಾರ್ಯ ವಿಧಾನವನ್ನು ದಿನಾಂಕ: 14.7.1993ರ ಅಧಿಕೃತ ಜ್ಞಾಪನ ಸಂಖ್ಯೆ ಡಿಪಿಎಆರ್ 22 ಎಸ್‌ಆರ್‌ಆರ್ 93ರಲ್ಲಿ ವಿವರಿಸಿದ್ದು, ಇದರ ಪ್ರಕಾರ ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆ ಎದುರಿಸುತ್ತಿರುವ ಸರ್ಕಾರಿ ನೌಕರರುಗಳನ್ನು ಮುಂಬಡ್ತಿಗೆ ಪರಿಗಣಿಸಿದಾಗ ಸಕ್ಷಮ ನೇಮಕಾತಿ ಪ್ರಾಧಿಕಾರ / ಇಲಾಖಾ ಮುಂಬಡ್ತಿ ಸಮಿತಿಯು ಅಂತಹ ನೌಕರರುಗಳ ಪ್ರಕರಣಗಳನ್ನು ಪರಿಗಣಿಸಿ, ಪರಿಶೀಲಿಸಿ ಅವರು ಮುಂಬಡ್ತಿ ಹೊಂದಲು ಅರ್ಹರೇ ಮತ್ತು ಸೂಕ್ತರೇ ಎಂಬುದನ್ನು ನಿರ್ಧರಿಸಿ ತನ್ನ ಶಿಫಾರಸ್ಸನ್ನು ಮೊಹರಾದ ಲಕೋಟೆಯಲ್ಲಿಡಬೇಕಾಗುತ್ತದೆ. ನಂತರದಲ್ಲಿ ಇಲಾಖಾ ವಿಚಾರಣೆಯು ಪೂರ್ಣಗೊಂಡು ಸಕ್ಷಮ

ಪ್ರಾಧಿಕಾರ ಸಂಬಂಧಿಸಿದ ನೌಕರರನ್ನು ಆರೋಪಮುಕ್ತರನ್ನಾಗಿಸಿ ಆದೇಶಿಸಿದಲ್ಲಿ ಆತನಿಗೆ ಜ್ಯೇಷ್ಠತೆಯಲ್ಲಿ ಅತ್ಯಂತ ನಿಕಟವಾಗಿ ಕಿರಿಯವರಾದ ಅಧಿಕಾರಿ / ನೌಕರನು ಮುಂಬಡ್ತಿ ಹೊಂದಿದ ದಿನಾಂಕದಿಂದಲೇ ಪೂರ್ವಾನ್ವಯವಾಗಿ ಅನ್ವಯವಾಗುವಂತೆ ಮುಂಬಡ್ತಿ ನೀಡಲು ಆಸ್ಪದವಿರುತ್ತದೆ. ಆರೋಪಗಳು ಸಾಬೀತಾಗಿ ದಂಡನೆ ವಿಧಿಸಿದಲ್ಲಿ ಮೊಹರು ಲಕೋಟೆಯನ್ನು ತೆರೆಯುವ ಪ್ರಶ್ನೆ ಉದ್ಭವಿಸುವುದಿಲ್ಲ.

ಅಧಿಕೃತ ಜ್ಞಾಪನ ಸಂಖ್ಯೆ ಡಿಪಿಎಆರ್ 22 ಎಸ್‌ಆರ್‌ಆರ್ 93, ದಿನಾಂಕ 14.7.1993ರ ಅನ್ವಯ ಮೊಹರಾದ ಲಕೋಟೆ ಪದ್ಧತಿಯನ್ನು ಅನುಸರಿಸುವ ಉದ್ದೇಶಕ್ಕಾಗಿ ಇಲಾಖಾ ವಿಚಾರಣೆಯಲ್ಲಿ ಸಂಬಂಧಿಸಿದ ನೌಕರರ ವಿರುದ್ಧ ದೋಷಾರೋಪಣಾ ಪಟ್ಟಿ ಜಾರಿಯಾಗಿದ್ದಲ್ಲಿ ಅಥವಾ ಕ್ರಿಮಿನಲ್ ಮೊಕದ್ದಮೆಯಲ್ಲಿ ಚಾರ್ಜ್‌ಶೀಟ್ ಹಾಕಲಾಗಿದ್ದಲ್ಲಿ ಆ ದಿನಾಂಕದಿಂದ ಇಲಾಖಾ ವಿಚಾರಣೆ ಪ್ರಾರಂಭವಾಗಿದೆಯೆಂದು ಪರಿಗಣಿಸ ಬೇಕಾಗಿರುತ್ತದೆ.

ಈ ಪ್ರಕರಣದಲ್ಲಿ ದೋಷಾರೋಪಣಾ ಪಟ್ಟಿ ಜಾರಿಯಾದ ನಂತರವೂ ಸಹ ಆರೋಪಿತ ನೌಕರರಾದ ಶ್ರೀಮತಿ ಎನ್. ಶಾರದಾಂಬ ಇವರು ಶಾಖಾಧಿಕಾರಿ ಮತ್ತು ಅಧೀನ ಕಾರ್ಯದರ್ಶಿ ವೃಂದಕ್ಕೆ ಮುಂಬಡ್ತಿ ಹೊಂದಿರುವುದು ಅಧಿಕೃತ ಜ್ಞಾಪನ ಸಂಖ್ಯೆ ಡಿಪಿಎಆರ್ 22 ಎಸ್‌ಆರ್‌ಆರ್ 93, ದಿನಾಂಕ 14.7.1993ರ ಸೂಚನೆಗಳಿಗೆ ವಿರುದ್ಧವಾಗಿರುವುದರಿಂದ ಶ್ರೀಮತಿ ಎನ್. ಶಾರದಾಂಬ ಇವರಿಗೆ ತಮಗೆ ಅಧೀನ ಕಾರ್ಯದರ್ಶಿ ವೃಂದಕ್ಕೆ ಮುಂಬಡ್ತಿ ನೀಡಿರುವುದನ್ನು ಏಕೆ ಹಿಂಪಡೆಯಬಾರದು ಎಂಬ ಬಗ್ಗೆ ತಮ್ಮ ಹೇಳಿಕೆ ಸಲ್ಲಿಸುವಂತೆ ಮೇಲೆ ಓದಲಾದ (4)ರಲ್ಲಿ ಶೋಕಾಸ್ ನೋಟೀಸ್ ಜಾರಿಗೊಳಿಸಲಾಗಿತ್ತು.

ಈ ಬಗ್ಗೆ ಶ್ರೀಮತಿ ಎನ್. ಶಾರದಾಂಬ, ಇವರು ಮೇಲೆ ಓದಲಾದ (5)ರಲ್ಲಿನ ದಿನಾಂಕ: 23.5.2014ರ ಮನವಿಯಲ್ಲಿ ದಿನಾಂಕ 20.2.2014ರಂದು ತಮಗೆ ನೀಡಲಾಗಿದ್ದ ನೋಟೀಸ್‌ಗೆ ತಮ್ಮ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ತಮ್ಮ ಹೇಳಿಕೆಯಲ್ಲಿ ದೋಷಾರೋಪಣಾ ಪಟ್ಟಿಗೆ ದಿನಾಂಕ: 16.1.2007ರಂದು ತಾವು ಉತ್ತರವನ್ನು ನೀಡಿದ್ದು, ನಂತರ ತಮಗೆ ಯಾವುದೇ ವಿಚಾರಣಾ ವರದಿಯನ್ನು ಒದಗಿಸದಿದ್ದುದರಿಂದ ತಮ್ಮ ಸಮಜಾಯಿಷಿಯು ಸಮರ್ಪಕವಾಗಿದೆ. ಈ ಹಿನ್ನೆಲೆಯಲ್ಲಿ ತಮ್ಮ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲಾಗಿದೆಯೆಂದು ತಾವು ಭಾವಿಸಿದ್ದು, ತಮಗೆ ದೊರೆತ ಮುಂಬಡ್ತಿಗಳು ಕ್ರಮಬದ್ಧವಾಗಿರುವುದಾಗಿ ತಾವು ಭಾವಿಸಿರುತ್ತೇವೆಂದು, ಮುಂಬಡ್ತಿ ನೀಡುವ ಪೂರ್ಣ ಜವಾಬ್ದಾರಿಯು ನೇಮಕಾತಿ ಪ್ರಾಧಿಕಾರದ್ದಾಗಿದ್ದು, ನೌಕರರನ್ನು ಜವಾಬ್ದಾರಿ ಮಾಡುವುದು ಕ್ರಮಬದ್ಧವಲ್ಲವೆಂದು, ಆದ್ದರಿಂದ ತಮಗೆ ನೀಡಿರುವ ಮುಂಬಡ್ತಿಗಳನ್ನು ಹಿಂದಕ್ಕೆ ಪಡೆಯಲಾಗುವುದೆಂದು ತಿಳಿಸುತ್ತಿರುವುದು ಕಾನೂನು ಬಾಹಿವಾಗಿರುತ್ತವೆಂದು ಹಾಗೂ ಸರ್ಕಾರದ ಅನೇಕ ಮಾರ್ಗದರ್ಶಿಗಳ ವಿರುದ್ಧವಾಗಿರುತ್ತದೆಂದೂ, ಆದ್ದರಿಂದ ಪ್ರಕರಣವನ್ನು ಇಲ್ಲಿಗೇ ಮುಕ್ತಾಯಗೊಳಿಸಬೇಕೆಂದು ಕೋರಿರುತ್ತಾರೆ.

ಅಧಿಕಾರಿಯವರು ನೀಡಿರುವ ವಿವರಣೆಯನ್ನು ಪರಿಶೀಲಿಸಿದ ಸರ್ಕಾರವು ಶ್ರೀಮತಿ ಎನ್. ಶಾರದಾಂಬ, ಇವರು ತಮ್ಮ ಹೇಳಿಕೆಯೊಂದಿಗೆ ಯಾವುದೇ ಸಮರ್ಥನೀಯವಾದ ದಾಖಲೆಯನ್ನು ಸಲ್ಲಿಸಲು ವಿಫಲರಾಗಿರುವುದರಿಂದ ಹಾಗೂ ಶ್ರೀಮತಿ ಎನ್. ಶಾರದಾಂಬ ಇವರ ವಿರುದ್ಧ ದಿನಾಂಕ:27.12.2006ರಂದೇ ದೋಷಾರೋಪಣಾ ಪಟ್ಟಿ ಜಾರಿಯಾಗಿದ್ದು ಸದರಿಯವರಿಗೆ ಅಧೀನ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕ: 31.12.2012ರಂದು ಸಹ ವಿಚಾರಣೆಯು ಬಾಕಿಯಿದ್ದುದರಿಂದ ಸದರಿಯವರಿಗೆ ಅಧೀನ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿರುವುದು ಅಧಿಕೃತ ಜ್ಞಾಪನ ಸಂಖ್ಯೆ ಡಿಪಿಎಆರ್ 22 ಎಸ್‌ಆರ್‌ಆರ್ 93, ದಿನಾಂಕ 14.7.1993ರ ಸೂಚನೆಗಳಿಗೆ ವಿರುದ್ಧವಾಗಿರುವುದರಿಂದ ಅಧಿಕಾರಿಯವರ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ತೀರ್ಮಾನಿಸಿ, ಶ್ರೀಮತಿ ಎನ್. ಶಾರದಾಂಬ ಇವರಿಗೆ ಅಧೀನ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿರುವುದನ್ನು ಹಿಂಪಡೆಯಲು ನಿರ್ಧರಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 5 ಸೇಇವಿ 2013, ಬೆಂಗಳೂರು, ದಿನಾಂಕ 11 ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಎನ್. ಶಾರದಾಂಬ ಇವರಿಗೆ ವೇತನ ಶ್ರೇಣಿ ರೂ./ 28100–50100ರ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗೆ ಮುಂಬಡ್ತಿ ನೀಡಿರುವುದನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆದು ಆದೇಶಿಸಿದೆ.

ಶ್ರೀಮತಿ ಎನ್. ಶಾರದಾಂಬ ಇವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸಿಬ್ಬಂದಿ) ವಿಭಾಗದಲ್ಲಿ ಶಾಖಾಧಿಕಾರಿ ವೃಂದದಲ್ಲಿ ಕೂಡಲೇ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 597**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ–ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2006, ದಿನಾಂಕ: 15.06.2006
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 302 ಸಅಸೇ 2009, ದಿನಾಂಕ: 09.06.2009.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 225 ಸಅಸೇ 2010, ದಿನಾಂಕ: 15.05.2010.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 222 ಸಅಸೇ 2011, ದಿನಾಂಕ: 07.05.2011.

5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 225 ಸಅಸೇ 2012, ದಿನಾಂಕ: 07.05.2012.
6. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ:ಗ್ರಾಅಪ 15 ಸ್ವಜಸಿ 2013, ದಿನಾಂಕ: 06.11.2013

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1–5) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ನಿರ್ದೇಶಕರು (ಸ್ವ–ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ ಮತ್ತು ಕಾಲಕಾಲಕ್ಕೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ(6)ರಲ್ಲಿ ಓದಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ:ಗ್ರಾಅಪ 15 ಸ್ವಜಸಿ 2013, ದಿನಾಂಕ: 06.11.2013ರಲ್ಲಿ ದಿನಾಂಕ:25.06.2013ರಿಂದ ಒಂದು ವರ್ಷದ ಅವಧಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ನಿರ್ದೇಶಕರು (ಸ್ವ–ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರೆಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 981 ಸಅಸೇ 2013, ಬೆಂಗಳೂರು, ದಿನಾಂಕ 28ನೇ ಜೂನ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ನಿರ್ದೇಶಕರು (ಸ್ವ–ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:25.06.2013ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ **ಮತ್ತು ಅವರ ಹೆಸರಿನಲ್ಲಿ,**
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 598**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಗಣಿ ವಿಭಾಗದಲ್ಲಿರುವ ಪೀಠಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಹಾಗೂ ಹೆಚ್ಚುವರಿ ಎರಡು ಹಿರಿಯ ಸಹಾಯಕರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಡತ ಸಂಖ್ಯೆ:ಸಿಐ 533 ಕಾರ್ಯದರ್ಶಿ 2014.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತ ಸಂಖ್ಯೆ: ಸಿಐ 533 ಕಾರ್ಯದರ್ಶಿ 2014ರಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಗಣಿ ವಿವಾದಗಳಿಗೆ ಸಂಬಂಧಿಸಿದಂತೆ ವಿವಿಧ ನ್ಯಾಯಾಲಯಗಳಲ್ಲಿ ಹಲವಾರು ಪ್ರಕರಣಗಳು ದಾಖಲೆಗೊಂಡಿದ್ದು, ಪ್ರತಿಯೊಂದು ಪ್ರಕರಣದಲ್ಲಿ ಇಲಾಖೆಯ ಉನ್ನತಾಧಿಕಾರಿಗಳನ್ನು ಪ್ರತಿವಾದಿಗಳನ್ನಾಗಿ ಮಾಡಿ ಹಲವಾರು ಮಧ್ಯಂತರ ಅರ್ಜಿಗಳನ್ನು ದಾಖಲು ಮಾಡಲಾಗಿದೆ. ಅವುಗಳನ್ನು ವಿಲೇವಾರಿ ಮಾಡಲು ಇಲಾಖೆಯಲ್ಲಿ ಸಿಬ್ಬಂದಿಗಳ ಕೊರತೆಯಿಂದ ಕಛೇರಿ ಕೆಲಸಗಳಿಗೆ ತೀವ್ರತರವಾದ ತೊಂದರೆಯುಂಟಾಗಿ, ನ್ಯಾಯಾಲಯ ನಿಂದನೆಗಳಾಗುವ ಸಾಧ್ಯತೆಗಳು ಹೆಚ್ಚಾಗಿವೆ ಎಂದು ತಿಳಿಸಿ ಗಣಿ ವಿಭಾಗದಲ್ಲಿನ ಪೀಠಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಹುದ್ದೆಯಾಗಿ ಉನ್ನತೀಕರಿಸುವಂತೆ ಹಾಗೂ ಹೆಚ್ಚುವರಿಯಾಗಿ ಎರಡು ಹಿರಿಯ ಸಹಾಯಕರ ಹುದ್ದೆಗಳನ್ನು ಸೃಜಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಲುಸೇ 2014, ಬೆಂಗಳೂರು, ದಿನಾಂಕ: 16ನೇ ಜುಲೈ, 2014**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಗಣಿ ವಿಭಾಗದಲ್ಲಿರುವ ಪೀಠಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ, ಸದರಿ ವಿಭಾಗಕ್ಕೆ ಹೆಚ್ಚುವರಿಯಾಗಿ ಎರಡು ಹಿರಿಯ ಸಹಾಯಕರ ಹುದ್ದೆಗಳನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:15.07.2014ರ ಆರ್ಥಿಕ ಇಲಾಖೆಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ **ಮತ್ತು ಅವರ ಹೆಸರಿನಲ್ಲಿ**
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 599**

## ಸಹಕಾರ ಸಚಿವಾಲಯ

**ವಿಷಯ :** 2014–15ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಜಾರಿಗೊಳಿಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗ ಸೂಚಿಗಳನ್ನು ಬದಲಾಯಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 3. ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಸ್ 2014, ದಿನಾಂಕ: 26.02.2014.

4. ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಸ್ 2014, ದಿನಾಂಕ: 30.05.2014.

5. ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಸ್ 2014, ದಿನಾಂಕ: 16.07.2014.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2014–15ನೇ ಸಾಲಿಗೆ ನಗರ ಯಶಸ್ವಿನಿ ಯೋಜನೆಯಡಿಯಲ್ಲಿ ನಗರ ಸಹಕಾರಿ ಸದಸ್ಯರ ನೋಂದಾವಣೆಯನ್ನು ಪ್ರಾರಂಭಿಸಲು ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಓದಲಾದ (1)ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ [7],[8],[9],[10] ಮತ್ತು [13ಅ]ಕ್ಕೆ ಬದಲಾವಣೆ ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಓದಲಾದ (2)ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ [5]ಕ್ಕೆ ಬದಲಾವಣೆ ಮಾಡಿ ಆದೇಶ ಹೊರಡಿಸಲಾಗಿದೆ.

2014–15ನೇ ಸಾಲಿನಲ್ಲಿ ನಗರ ಯಶಸ್ವಿನಿ ಯೋಜನೆಯಡಿಯಲ್ಲಿ ದಿನಾಂಕ:09.08.2014 ರವರೆಗಿನ ಪ್ರಗತಿಯನ್ನು ಅವಲೋಕಿಸಿದರೆ 93654 ಸದಸ್ಯರು ಮಾತ್ರ ಯೋಜನೆಯಡಿಯಲ್ಲಿ ನೋಂದಾವಣೆಯಾಗಿದ್ದು, ನೋಂದಾವಣೆಯ ಗುರಿಗೆ ಹೋಲಿಸಿದರೆ ನೋಂದಾವಣೆಯ ಪ್ರಗತಿಯು ತೀರಾ ಕುಂಠಿತವಾಗಿರುತ್ತದೆ. ದಿನಾಂಕ:02.08.2014ರಂದು ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಚಾಮರಾಜಪೇಟೆ ಇಲ್ಲಿನ ಸಭಾಂಗಣದಲ್ಲಿ ಜರುಗಿದ ಸಭೆಯಲ್ಲಿ ಸೆಪ್ಟೆಂಬರ್ ಮಾಹೆಯಲ್ಲಿ ಸಂಘಗಳ ಸಾಮಾನ್ಯ ಸಭೆಗಳನ್ನು ಜರುಗಿಸುತ್ತಿದ್ದು, ಈ ಸಭೆಯ ಸಭಾ ನೋಟೀಸ್‌ನೊಂದಿಗೆ ನಗರ ಯಶಸ್ವಿನಿ ಯೋಜನೆಯ ಬ್ರೋಚರ್‌ಗಳನ್ನು ಸದಸ್ಯರಿಗೆ ಕಳುಹಿಸಿ ಹೆಚ್ಚಿನ ಸಹಕಾರ ಸಂಘಗಳ ಸದಸ್ಯರಿಗೆ ತಿಳುವಳಿಕೆ ಮೂಡಿಸುವುದಾಗಿ ಸಭೆಯಲ್ಲಿನ ಇಲಾಖಾಧಿಕಾರಿಗಳು ತಿಳಿಸಿರುತ್ತಾರೆ. ಅಲ್ಲದೇ ಸಭೆಯಲ್ಲಿ ಹಾಜರಿದ್ದ ಸಹಕಾರ ಸಂಘಗಳ ಅಧಿಕಾರಿಗಳು ಮತ್ತು ಇಲಾಖಾಧಿಕಾರಿಗಳು ದಿನಾಂಕ:30.09.2014ರವರೆಗೆ ಅವಧಿ ವಿಸ್ತರಿಸುವಂತೆ ಕೋರಿರುತ್ತಾರೆ.

ಆದಕಾರಣದಿಂದ ಈವರೆಗಿನ ಸದಸ್ಯರ ನೋಂದಾವಣೆ ಕಡಿಮೆಯಿರುವುದರಿಂದ ಹೆಚ್ಚಿನ ಪ್ರಗತಿ ಸಾಧಿಸಲು ಅನುವಾಗುವಂತೆ ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಸ್ 2014 ದಿನಾಂಕ:16.07.2014ರಂದು ಹೊರಡಿಸಿರುವ ಆದೇಶದ ಮಾರ್ಗಸೂಚಿ (1)ನ್ನು ಬದಲಾಯಿಸುವ ಅಗತ್ಯತೆ ಇರುವುದಿರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ: 19.08.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಸ್ 2014, ದಿನಾಂಕ:16.07.2014ರಲ್ಲಿ ಹೊರಡಿಸಿರುವ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ ಸಂಖ್ಯೆ(1)ನ್ನು ಈ ಕೆಳಕಂಡಂತೆ ಬದಲಾಯಿಸಿ ಆದೇಶ ಹೊರಡಿಸಲಾಗಿದೆ.

1) **ಮಾರ್ಗಸೂಚಿ (1):**
**ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ನವೀಕರಿಸುವ ಕೊನೆಯ ದಿನಾಂಕ: 30.09.2014.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR.664
SC- 25

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2014–15ನೇ ಸಾಲಿನಿಂದ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯನ್ನು ಜಾರಿಗೊಳಿಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗ ಸೂಚಿಗಳನ್ನು ಬದಲಾಯಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2014, ದಿನಾಂಕ:26.02.2014.

2. ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2014, ದಿನಾಂಕ:30.05.2014.

3. ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2014, ದಿನಾಂಕ:16.07.2014.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2014–15ನೇ ಸಾಲಿಗೆ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೊಂದಾವಣಿಯನ್ನು ಪ್ರಾರಂಭಿಸಲು ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಓದಲಾದ(1)ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ [9],[10] ಮತ್ತು [14ಅ]ಕ್ಕೆ ಬದಲಾವಣೆ ಮಾಡಿ ಆದೇಶದ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಓದಲಾದ(2)ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ [3]ಕ್ಕೆ ಬದಲಾವಣೆ ಮಾಡಿ ಆದೇಶದ ಹೊರಡಿಸಲಾಗಿದೆ.

2014–15ಕ್ಕೆ ಸಾಲಿನಲ್ಲಿ ದಿನಾಂಕ:09.08.2014ರವರೆಗಿನ ಪ್ರಗತಿಯನ್ನು ಅವಲೋಕಿಸಿದರೆ 23,02,692 ಸದಸ್ಯರು ಮಾತ್ರ ಯೋಜನೆಯಡಿಯಲ್ಲಿ ನೋಂದಾವಣೆಯಾಗಿದ್ದು, 2013–14ನೇ ಸಾಲಿನ ಸದಸ್ಯರ ನೋಂದಾವಣೆಗೆ ಹೋಲಿಸಿದರೆ 60.62% ಮಾತ್ರ ಸಾಧನೆಯಾಗಿದ್ದು, ಪ್ರಗತಿಯು ಕಡಿಮೆ ಇರುತ್ತದೆ. ಸದಸ್ಯರ ನೋಂದಾವಣೆಗಾಗಿ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ಪೂರೈಸಿರುವ ನೋಂದಾವಣೆ ಅರ್ಜಿಗಳು ಖಾಲಿಯಾಗಿದ್ದು, ಕೆಲವು ಜಿಲ್ಲೆಗಳಿಂದ ಅರ್ಜಿ ಪಾರಂಗಳಿಗೆ ಬೇಡಿಕೆ ಬಂದಿರುವ ಹಿನ್ನೆಲೆಯಲ್ಲಿ ಹೆಚ್ಚುವರಿಯಾಗಿ ಅರ್ಜಿಗಳನ್ನು ಮುದ್ರಿಸಿ ಪೂರೈಸಲು ಈಗಾಗಲೇ ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ಆದರೆ, ಸಂಬಂಧಿಸಿದ ಸಹಕಾರ ಸಂಘಗಳ ಉಪನಿಂಧಕರ ಕಛೇರಿಗೆ ಇನ್ನೂ ಅರ್ಜಿಗಳು ತಲುಪದೇ ಇರುವುದರಿಂದ ಅರ್ಜಿ ಪಾರಂಗಳ ಕೊರತೆ ಇರುವ ಜಿಲ್ಲೆಗಳಲ್ಲಿ ನೋಂದಾವಣೆಯು ಕುಂಠಿತವಾಗಿರುತ್ತದೆ. ಅಲ್ಲದೇ ಸಹಕಾರ ಸಂಘಗಳ ಮಹಾಸಭೆಗಳನ್ನು ಜರುಗಿಸುವ ಬಗ್ಗೆ ಗಮನವಹಿಸುತ್ತಿರುವುದರಿಂದ ನೊಂದಾವಣೆಯು ಕುಂಠಿತವಾಗಿರುತ್ತದೆ. ಆದುದರಿಂದ, ಈಗಾಗಲೇ ಸಹಕಾರ ಸಂಘಗಳ ಮಟ್ಟದಲ್ಲಿ ಸಭೆಗಳನ್ನು ಜರುಗಿಸುತ್ತಿದ್ದು, ಸೆಪ್ಟಂಬರ್ 2014ರ ಅಂತ್ಯದವರೆಗೆ ಮುಮದುವರೆಸುವಂತೆ ಕೋರಿಕೆಗಳು ಬರುತ್ತಿವೆ. ಅಲ್ಲದೇ ನೋಂದಾವಣೆಯಲ್ಲಿ 50.00 ಲಕ್ಷ ಗುರಿ ಸಾಧಿಸುವುದು ಯೋಜನೆಯ ಹಿತದೃಷ್ಟಿಯಿಂದ ಹೆಚ್ಚಿನ ಕಾಲಾವಕಾಶ ನೀಡಲು ನೋಂದಾವಣೆಯ ಅವಧಿಯನ್ನು ವಿಸ್ತರಿಸುವುದು ಅವಶ್ಯಕವಾಗಿದೆ. ಆದಕಾರಣದಿಂದ ಈ ವರೆಗಿನ ಸದಸ್ಯರ ನೋಂದಾವಣೆ ಕಡಿಮೆಯಿರುವುದರಿಂದ ಹೆಚ್ಚಿನ ಪ್ರಗತಿ ಸಾಧಿಸಲು ಅನುವಾಗುವಂತೆ ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2014, ದಿನಾಂಕ: 16.07.2014 ರಂದು ಹೊರಡಿಸಿರುವ ಆದೇಶದ ಮಾರ್ಗಸೂಚಿ (1)ನ್ನು ಬದಲಾಯಿಸುವ ಅಗತ್ಯತೆ ಇರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ:19.08.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2014, ದಿನಾಂಕ:16.07.2014ರಲ್ಲಿ ಹೊರಡಿಸಿರುವ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ ಸಂಖ್ಯೆ(1)ನ್ನು ಈ ಕೆಳಕಂಡಂತೆ ಬದಲಾಯಿಸಿ ಆದೇಶ ಹೊರಡಿಸಲಾಗಿದೆ.

1) **ಮಾರ್ಗಸೂಚಿ (1):**

**ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ನವೀಕರಿಸುವ ಕೊನೆಯ ದಿನಾಂಕ: 30.09.2014.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR.665**
**SC.25**

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## COMMERCE & INDUSTRIES SECRETARIAT

Sub : Creation of a post of the rank of Principal Secretary with super-time scale and above, of IAS Cadre for the post of Managing Director Karnataka Mining Environment Restoration Corporation (KMERC).

Read :
1) Hon'ble Supreme Court's Order dtd:28.09.2012.
2) Central Empowered Committee report dtd: 10.10.2012.
3) Central Empowered Committee report dtd: 03.02.2013.
4) Hon'ble Supreme Court's Order dtd:18.04.2013.
5) Government of Karnataka Order No.CI 121 MMM 2014 dtd:21.06.2014.

**PREAMBLE :**

The Hon'ble Supreme Court in its Order dated: 28.09.2012 in Writ Petition No: 562/2009, read above at (1), has given directions for setting up of a Special Purpose Vehicle (SPV) for the purpose of ameliorative and mitigative measures as per the Comprehensive Environmental Plans for the Mining Impact Zone (CEPMIZ) around mining leases in Bellary, Chitradurga and Tumkur districts of Karnataka. Pursuant to the Hon'ble Apex Court Order the Central Empowered Committee (CEC) has proposed a Special Purpose Vehicle which will be a non-profitable organization under section 25 of Companies Act 1956 and has submitted a detailed scheme to the Hon'ble Supreme Court on 10.10.2012. The Hon'ble Supreme Court in its final Order dated 18.04.2013 has accepted the recommendations of the CEC for setting up of SPV.

In compliance of the final Orders of the Hon'ble Supreme Court, the State Govt. has established a non-profit Company, Karnataka Mining Environment Restoration Corporation (KMERC), and registered under Sec.25 of Companies Act 1957 (section 8 of Companies Act 2013) vide Govt. Order dated 26.06.2014 read at above (5). The implementation of the CEPMIZ plans through the company involves multi disciplinary nature of activities to be carried out as enumerated in the CEC Report dated: 10.10.2012. The State Cabinet has accorded approval to create a post of Principal Secretary to the Govt. who will be an officer not less than the rank of

Principal Secretary to the Govt., in Super Time Scale and above, to work as an Officer on Special Duty (OSD) and Managing Director of the KMERC Company. Hence the following order;

**GOVERNMENT ORDER NO. CI 121 MMM.2014, BANGALORE, DATED: 25.08.2014.**

In the circumstances explained above in the preamble the Government in exercise of the powers vested under the transaction of Business rules 1977 do hereby create one post of Super time scale and above, not less than the rank of Principal Secretary to the Govt. from the IAS Cadre with immediate effect to work as an Officer on Special Duty/Managing Director, Karnataka Mining Environment Restoration Corporation (KMERC) Company.

This Government Order is issued with concurrence of Finance Department vide opinion No. FD 589 Exp-1/14, Dated: 29.05.2014 and Department of personnel and Administrative Reforms vide opinion in the U.O. Note No. DPAR 403 SAS 2014, dated 07.07.2014.

By Order and in the Name of the Governor of Karnataka

**PR. 666**
**SC. 200**

**L.S. Srikanta Babu**

Under Secretary to Government, (Mines) (I&C)

Commerce & Industries Department

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರದ ಸರ್ವೆ ನಂ.165/1 ಪೈಕಿ 2184 ಚ.ಮೀ ನಿವೇಶನವನ್ನು ಹೊಸಪೇಟೆ ನಗರ ಸಭೆಗೆ ಲೋಕೋಪಯೋಗಿ ಇಲಾಖೆಯಿಂದ ಹಸ್ತಾಂತರಿಸುವ ಕುರಿತು

**ಓದಲಾಗಿದೆ :** 1. ಮಾನ್ಯ ಪ್ರವಾಸೋದ್ಯಮ ಹಾಗೂ ಜಿಲ್ಲಾ ಉಸ್ತವಾರಿ ಸಚಿವರ ದಿನಾಂಕ: 07.12.2012 ಮತ್ತು 03.01.2013ರ ನಡವಳಿಗಳು.

2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಇವರ ಪತ್ರ ಸಂಖ್ಯೆ: ಸಿಇಎನ್/ ಭೂಸ್ವಾಧೀನ ಶಾಖೆ/ ವಿವ–36/2012–13/ 9508, ದಿನಾಂಕ: 03.01.2013.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ದಿನಾಂಕ 07.12.2012 ಮತ್ತು ದಿನಾಂಕ 03.01.2013ರ ನಡವಳಿಗಳಲ್ಲಿ ಹಿಂದಿನ ಮಾನ್ಯ ಪ್ರವಾಸೋದ್ಯಮ ಸಚಿವರು ಹಾಗೂ ಬಳ್ಳಾರಿ ಜಿಲ್ಲಾ ಉಸ್ತವಾರಿ ಸಚಿವರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರದ ಸರ್ವೆ ನಂ. 165/1ರ ಪೈಕಿ 2184 ಚ.ಮೀ ನಿವೇಶನವು ಲೋಕೋಪಯೋಗಿ ಇಲಾಖೆಗೆ ಸೇರಿದ್ದಾಗಿದ್ದು, ಸದರಿ ನಿವೇಶನದ ಸುತ್ತಲೂ ಹೊಸಪೇಟೆ ನಗರ ಸಭೆಗೆ ಸೇರಿದ ನಿವೇಶನಗಳು ಇರುವುದರಿಂದ ಈ ಎಲ್ಲಾ ನಿವೇಶನಗಳನ್ನು ಒಂದುಗೂಡಿಸಿ. ಸಾರ್ವಜನಿಕರಿಗೆ, ವ್ಯಾಪಾರಿಗಳಿಗೆ ಅನುಕೂಲ ಕಲ್ಪಿಸುವ ದೃಷ್ಟಿಯಿಂದ ಮಾರುಕಟ್ಟೆ ನಿರ್ಮಾಣ ಮಾಡುವುದು, ಸಾರ್ವಜನಿಕ ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸುವುದು ಹಾಗೂ ಸರ್ಕಾರಿ ಕಛೇರಿಗಳ ಕಟ್ಟಡಗಳನ್ನು ನಿರ್ಮಾಣ ಮಾಡಲು ಉದ್ದೇಶಿಸಲಾಗಿರುತ್ತದೆ. ಈ ಎಲ್ಲಾ ವ್ಯವಸ್ಥೆಗಳನ್ನು ಸರ್ಮಜನಿಕರಿಗೆ ಕಲ್ಪಿಸಿಕೊಡುವ ದೃಷ್ಟಿಯಿಂದ ಪ್ರಸ್ತಾಪಿಸಿರುವ ನಿವೇಶನವನ್ನು ಹೊಸಪೇಟೆ ನಗರ ಸಭೆಗೆ ಹಸ್ತಾಂತರ ಮಾಡಿ ಆದೇಶ ಹೊರಡಿಸಲು ಕೋರಿದ್ದರು.

2. ಮೇಲೆ ಓದಲಾದ (2)ರ ದಿನಾಂಕ 03.01.2013ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರದ ಸರ್ವೆ ನಂ.165/1ರ ಪೈಕಿ 2184 ಚ.ಮೀ ನಿವೇಶನವು ಹಾಗೂ ಲೋಕೋಪಯೋಗಿ ಇಲಾಖೆಯ ಉಪವಿಭಾಗ ಕಚೇರಿ ಕಟ್ಟಡವು ನಗರದ ಮಧ್ಯೆ ಭಾಗದಲ್ಲಿರುವುದರಿಂದ ಇಕ್ಕಟ್ಟಾದ ಸ್ಥಳದಲ್ಲಿರುತ್ತದೆ. ಇದರಿಂದ ಸಂಚಾರದಿಂದ ಜನತೆಗೆ ತೊಂದರೆಯಾಗುತ್ತಿದೆ. ಸಧ್ಯಕ್ಕೆ ಸದರಿ ಕಟ್ಟಡವನ್ನು ಸ್ಥಳಾಂತರಿಸುವುದು ಸೂಕ್ತವಿರುತ್ತದೆ, ಹೊಸಪೇಟೆ ರಾಷ್ಟ್ರೀಯ ಹೆದ್ದಾರಿ ಕಛೇರಿ ಪಕ್ಕದಲ್ಲಿ ಲೋಕೋಪಯೋಗಿ ಇಲಾಖೆಗೆ ಸೇರಿದ ನಿವೇಶನದಲ್ಲಿ ಲೋಕೋಪಯೋಗಿ ಉಪವಿಭಾಗ ಕಟ್ಟಡ ನಿರ್ಮಿಸಬಹುದಾಗಿದೆ ಎಂದು ಅಭಿಪ್ರಾಯಪಡುತ್ತಾ, ನಗರದ ಮಧ್ಯೆ ಭಾಗದಲ್ಲಿರುವ ಲೋಕೋಪಯೋಗಿ ಇಲಾಖೆಯ ಉಪವಿಭಾಗದ ಕಟ್ಟಡ/ ನಿವೇಶನದಮೌಲ್ಯ ನೊಂದಣಾಧಿಕಾರಿಯವರು ನಿಗಧಿ ಪಡಿಸಿರುವ ದರದಂತೆ ರೂ.3,56,12,356.00 ಗಳಾಗುತ್ತದೆ. ಸದರಿ ನಿವೇಶನದ ಮೂಲ ಸರ್ವೆ ನಂ.165/1 ಇದ್ದು, ಒಟ್ಟು 112.20 ಎಕರೆ ಇರುತ್ತದೆ. ಹಾಗೂ ಸದರಿ ಸರ್ವೆ ನಂಬರ್ ಗ್ರಾಮನತ್ತು ಆಗಿದ್ದು, ಪ್ರಸ್ತಾಪಿತ ನಿವೇಶನವು ಈ ಸರ್ವೆ ನಂಬರ್‌ಗೆ ಒಂದು ಭಾಗವಾಗಿದ್ದು, ನಿವೇಶನದ ಕಟ್ಟಡದ ಅಸೆಸ್‌ಮೆಂಟ್ ನಂಬರ್ 42, ಡೋರ್ ನಂ. 33 ಆಗಿರುತ್ತದೆಂದು, ಪ್ರಸ್ತುತ ಸದರಿ ಜಾಗವು ಹಾಗೂ ಕಟ್ಟಡವು ಸುಮಾರು 45–50 ವರ್ಷಗಳಿಂದ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುತ್ತದೆ. ಅಲ್ಲದೆ ಮಾರುಕಟ್ಟೆಯ ಮಧ್ಯೆ ಭಾಗದಲ್ಲಿರುತ್ತದೆ. ಈ ಜಾಗಕ್ಕೆ ನಗರ ಸಭೆಯಿಂದ ಅಸೆಸ್‌ಮೆಂಟ್ ಸಹ ಮಾಡಲಾಗಿದೆ. ನಗರ ಸಭೆಯ ದಾಖಲೆಗಳ ಪ್ರಕಾರ ಪಿಡಬ್ಲ್ಯೂಡಿ ಇಂಜಿನಿಯರಿಂಗ್ ಕ್ವಾರ್ಟ್ಸ್ ಎಂದು ಇರುತ್ತದೆಂದು ವರದಿ ಮಾಡಿರುತ್ತಾರೆ.

3. ಸದರಿ ಪ್ರಸ್ತಾವನೆಗೆ ನಗರಾಭಿವೃದ್ಧಿ ಇಲಾಖೆ ಮತ್ತು ಆರ್ಥಿಕ ಇಲಾಖೆಗಳ ಸಹಮತಿಯನ್ನು ಪಡೆಯಲಾಗಿದ್ದು, ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 561 ಬಿಎಂಎಸ್ 2012, ಬೆಂಗಳೂರು, ದಿನಾಂಕ: 31-7-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರದ ಸರ್ವೆ ನಂ.165/1 ಪೈಕಿ 2184 ಚ.ಮೀ ನಿವೇಶನ ಹಾಗೂ ಕಟ್ಟಡಗಳಿಗೆ ನಿಗದಿಪಡಿಸಿರುವ ಮೌಲ್ಯ ರೂ. 3,56,12,356.00 ಗಳನ್ನು ಹೊಸಪೇಟೆ ನಗರ ಸಭೆಯಿಂದ ಪಾವತಿಸಿಕೊಂಡು ಸದರಿ ನಿವೇಶನವನ್ನು ಸರ್ವಜನಿಕ ಉಪಯೋಗಿ ಕಟ್ಟಡ ಸಂಕೀರ್ಣ ಕಟ್ಟಲು ಮಾತ್ರ ಉಪಯೋಗಿಸುವುದು ಮತ್ತು ಈ ನಿವೇಶನವನ್ನು ಯಾವುದೇ ಖಾಸಗಿ ವ್ಯಕ್ತಿ ಹಾಗೂ ಸಂಸ್ಥೆಗಳಿಗೆ ನೀಡುತಕ್ಕದ್ದಲ್ಲ ಎಂಬ ಷರತ್ತಿನೊಂದಿಗೆ ಹೊಸಪೇಟೆ ನಗರಸಭೆಗೆ ಹಸ್ತಾಂತರಿಸಲು ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ.ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು,
ಜಲಸಾರಿಗೆ ಇಲಾಖೆ (ಕಟ್ಟಡಗಳು)

**PR.667**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ರಾಜ್ಯ ಪರಿಸರ ಆಘಾತ ಅಂದಾಜೀಕರಣ ಪ್ರಾಧಿಕಾರ (SEIAA) ಮತ್ತು ರಾಜ್ಯ ಮಟ್ಟದ ತಜ್ಞ ನಿಷ್ಕರ್ಷ ಸಮಿತಿ (SEAC) ಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 272 ಇಪಿಸಿ 2013, ದಿನಾಂಕ: 25.4.2014.
2. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಪತ್ರ ಸಂಖ್ಯೆ: ಮಾನಿಮಂ/33/ಹವಿ/2013-14/388, ದಿನಾಂಕ:19.8.2014
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ: 04.4.2014

**ಪ್ರಸ್ತಾವನೆ:-**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2014-15ನೇ ಸಾಲಿನ ಆಯವ್ಯಯ ಅಂದಾಜು ವೆಚ್ಚದ ಪಟ್ಟಿಯಲ್ಲಿನ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗೆ ಅನುಮೋದಿಸಲಾಗಿರುವ ಎಲ್ಲಾ ಮುಂದುವರೆದ ಯೋಜನೆ/ಮಾರ್ಪಾಡು ಯೋಜನೆಗಳನ್ನು ದಿನಾಂಕ: 1.4.2014 ರಿಂದ 31.3.2015ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದ ಲೆಕ್ಕಶೀರ್ಷಿಕೆ 3435-03-101-0-03 (ಯೋಜನೆ) ಅಡಿ ರೂ.75.00 ಲಕ್ಷಗಳನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಗೆ 2014-15ನೇ ಸಾಲಿಗೆ ಹಂಚಿಕೆ ಮಾಡಲಾಗಿದೆ.

ರಾಜ್ಯ ಪರಿಸರ ಮತ್ತು ಆಘಾತ ಅಂದಾಜೀಕರಣ ಪ್ರಾಧಿಕಾರ (SEIAA) ಮತ್ತು ರಾಜ್ಯ ಮಟ್ಟದ ತಜ್ಞ ನಿಷ್ಕರ್ಷ ಸಮಿತಿ (SEAC) ಯ ಕಾರ್ಯಚಟುವಟಿಕೆಗೆ ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯವರು ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಅದರಂತೆ, ಮೇಲೆ ಓದಲಾದ (3)ರ ಸರ್ಕಾರಿ ಆದೇಶದಂತೆ ಹಂಚಿಕೆಯಾಗಿರುವ ಅನುದಾನವನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರವನ್ನು ನೀಡಿರುತ್ತದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 204 ಇಪಿಸಿ 2014 ಬೆಂಗಳೂರು, ದಿನಾಂಕ: 25.8.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಲೆಕ್ಕ ಶೀರ್ಷಿಕೆ 3435-03-101-0-03 ರಲ್ಲಿ ಹಂಚಿಕೆಯಾಗಿರುವ ಅನುದಾನದಿಂದ ಮೊದಲನೇ ಹಾಗೂ ಎರಡನೇ ಕಂತಿನ ಅನುದಾನವಾಗಿ ರೂ.35.00 ಲಕ್ಷಗಳು (ರೂ. ಮೂವತ್ತೈದು ಲಕ್ಷಗಳು ಮಾತ್ರ) ರಾಜ್ಯ ಪರಿಸರ ಮತ್ತು ಆಘಾತ ಅಂದಾಜೀಕರಣ ಪ್ರಾಧಿಕಾರ (SEIAA) ಮತ್ತು ರಾಜ್ಯ ಮಟ್ಟದ ತಜ್ಞ ನಿಷ್ಕರ್ಷ ಸಮಿತಿ (SEAC) ಯ ಕಾರ್ಯಚಟುವಟಿಕೆಗಳ ಹಾಗೂ ಆಡಳಿತಾತ್ಮಕ ವೆಚ್ಚವನ್ನು ಭರಿಸಲು ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು ಇವರಿಗೆ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು ಇವರು ಬಿಡುಗಡೆ ಮಾಡಲಾಗಿರುವ ಅನುದಾನದ ಮೊತ್ತಕ್ಕೆ ಸ್ವೀಕರ್ತನ ಸ್ವೀಕೃತಿ ತಯಾರಿಸಿ ಸರ್ಕಾರದ ಕಾರ್ಯದರ್ಶಿಗಳು (ಪರಿಸರ ಮತ್ತು ಜೀವಿಶಾಸ್ತ್ರ), ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರಿಗೆ ಸಲ್ಲಿಸಿ, ಸದರಿ ಬಿಲ್ಲಿಗೆ ಸರ್ಕಾರದ ಅಧೀನ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ), ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಮೇಲು ರುಜು ಪಡೆದು ನಂತರ ಖಜಾನೆಗೆ ಸಲ್ಲಿಸಿ ಹಣವನ್ನು ಡ್ರಾ ಮಾಡುವಂತೆ ಆದೇಶಿಸಲಾಗಿದೆ.

ಸದರಿ ವೆಚ್ಚವನ್ನು ಪ್ರಸ್ತುತ ಸಾಲಿನ ಮಾರ್ಪಾಟು ಹೊಂದಿರುವ ಯೋಜನೆಗಳ ಲೆಕ್ಕ ಶೀರ್ಷಿಕೆ 3435-03-101-0-03 ಉಪ ಲೆಕ್ಕ ಶೀರ್ಷಿಕೆ 103 ಸಹಾಯಧನ ಸಾಮಾನ್ಯದಡಿಯಲ್ಲಿ ಭರಿಸತಕ್ಕದ್ದು. ಬಿಡುಗಡೆ ಮಾಡಲಾದ ಅನುದಾನವನ್ನು ಸರ್ಕಾರದಿಂದ ನಿಗಧಿಪಡಿಸಲಾದ ಮಾರ್ಗ ಸೂಚಿಗಳನ್ವಯ ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಹಣ ಉಪಯೋಗತಾ ಪ್ರಮಾಣ ಪತ್ರವನ್ನು ನಿಗಧಿತ ಸಮಯದಲ್ಲಿ ಸರ್ಕಾರಕ್ಕೆ ಸಲ್ಲಿಸುವುದು.

ಮಂಡಳಿಯು ಈ ಹಣಕ್ಕೆ ಸೂಕ್ತ ಲೆಕ್ಕ ನಿರ್ವಹಣೆ ಮಾಡಬೇಕು ಹಾಗೂ ಅಧಿಕೃತ ಲೆಕ್ಕ ಪರಿಶೋಧಕರಿಂದ ಲೆಕ್ಕ ಪರಿಶೋಧನೆ ಮಾಡಿಸಿ ಎಲ್ಲಾ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ ಆರ್ಥಿಕ ವರ್ಷ ಕೊನೆಗೊಂಡ ನಂತರ ದಿನಾಂಕ: 31.5.2015ರೊಳಗೆ ಸರ್ಕಾರಕ್ಕೆ ಲೆಕ್ಕ ಪರಿಶೋಧನಾ ವರದಿಯನ್ನು ಸಲ್ಲಿಸುವುದು ಹಾಗೂ ಉಪಯೋಗತಾ ಪ್ರಮಾಣ ಪತ್ರವನ್ನು ತಪ್ಪದೇ ಸಲ್ಲಿಸುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಅಪಜೀ 125 ಆಂಆಸ 2014, ದಿನಾಂಕ: 20.8.2014 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 03 ಟಿಎಫ್‌ಪಿ 2014, ದಿನಾಂಕ:04.04.2014 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಹೆಚ್. ಅನಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,(ಪರಿಸರ ಮತ್ತು ಜೀವಿಶಾಸ್ತ್ರ)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ ಇಲಾಖೆ.

PR.668
SC- 50

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ರಕ್ಷಣೆ ಮತ್ತು ಸಂರಕ್ಷಣೆಗಾಗಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಹೊರಡಿಸಿದ್ದ ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 215 ಇಎನ್‌ವಿ 2000 ದಿನಾಂಕ:18.11.2013ರನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 215 ಇಎನ್‌ವಿ 2000 ದಿನಾಂಕ:18.11.2003
2. ಕಾನೂನು ಇಲಾಖೆಯು ಕಡತ ಸಂಖ್ಯೆ:ಲಾ01 ಸಿಡಬ್ಲೂಡಿ 2014ರಲ್ಲಿ ದಿನಾಂಕ:25.06.2014ರಂದು ನೀಡುರುವ ಅಭಿಪ್ರಾಯ.
3. ನಗರಾಭಿವೃದ್ಧಿ ಇಲಾಖೆಯ ಅ.ಟಿ.ಸಂಖ್ಯೆ: ನಅಇ 181 ಎಂಎನ್‌ಐ 2013 ದಿನಾಂಕ:19.07.2014.

**ಪ್ರಸ್ತಾವನೆ:–**

ಅರ್ಕಾವತಿ ಮತ್ತು ಕುಮುದ್ವತಿ ನದಿಗಳನ್ನು ರಕ್ಷಿಸಿ ಜಲಾಶಯದ ಒಳಹರಿವು ಹೆಚ್ಚಿಸುವ ದೃಷ್ಠಿಯಿಂದ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 2015 ಇಎನ್‌ವಿ 2000 ದಿನಾಂಕ:18.11.2003ನ್ನು ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಪರಿಸರ (ನಿಯಂತ್ರಣ) ಕಾಯ್ದೆ 1986ರ ಕಲಂ 5ರಡಿ ಹೊರಡಿಸಿರುತ್ತದೆ.

ಮಾನ್ಯ ಕರ್ನಾಟಕ ಉಚ್ಚ ನ್ಯಾಯಲಯವು ರಿಟ್ ಅರ್ಜಿ ಸಂಖ್ಯೆ:38218ರಲ್ಲಿ ಸರ್ಕಾರದ ಅಧಿಸೂಚನೆ ದಿನಾಂಕ: 18.11.2003ರ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವು ತಿಳಿಸುವಂತೆ ಆದೇಶ ನೀಡಿದ ಹಿನ್ನೆಲೆಯಲ್ಲಿ ಕಾನೂನು ಇಲಾಖೆಯು ದಿನಾಂಕ:18.11.2003ರ ಅಧಿಸೂಚನೆಗೆ ಸಂಬಂಧಿಸಿದ ಎಲ್ಲಾ ಕಡತಗಳನ್ನು ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ ಪಡೆದು ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ಸರ್ಕಾರದ ಅಧಿಸೂಚನೆ ದಿನಾಂಕ:18.11.2003ನ್ನು ಪುನರ್‌ಪರಿಶೀಲಿಸುವ ಬಗ್ಗೆ ಅಭಿಪ್ರಾಯ ನೀಡಿರುತ್ತದೆ.

ಈ ಸಂಬಂಧ ಅಡಿಷನಲ್ ಅಡ್ವೋಕೇಟ್ ಜನರಲ್ ಇವರು ದಿನಾಂಕ: 04.07.2014ರ ಪತ್ರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಿರುವ ಮಾಹಿತಿಯ ಹಿನ್ನೆಲೆಯಲ್ಲಿ ಮತ್ತು ಕಾನೂನು ಇಲಾಖೆ ಅಭಿಪ್ರಾಯದ ಮೇರೆಗೆ ನಗರಾಭಿವೃದ್ಧಿ ಇಲಾಖೆಯು ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಈ ಕೆಳಕಂಡ ಅಂಶಗಳ ಬಗ್ಗೆ ಸೂಕ್ತ ಆದೇಶವನ್ನು ಶೀಘ್ರವಾಗಿ ಹೊರಡಿಸುವಂತೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯನ್ನು ಕೋರಿರುತ್ತದೆ.

1. ಅರಣ್ಯ ಮತ್ತು ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ದಿನಾಂಕ: 18.11.2003ರಂದು ಹೊರಡಿಸಲಾದ ಅಧಿಸೂಚನೆಯನ್ನು ಹಿಂಪಡೆಯುವಂತೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯನ್ನು ಕೋರುವುದು.
2. ಏತನ್ಮಧ್ಯೆ ಸರ್ಕಾರವು ಈ ವಿಷಯ ಕುರಿತು ಸಂಪೂರ್ಣವಾಗಿ ಪುನರ್ ಪರಿಶೀಲಿಸಿ ಹೊಸದಾಗಿ ಅಧಿಸೂಚನೆ ಹೊರಡಿಸುವವರೆಗೂ ಯಾವುದೇ ಹೊಸ ಅನಧಿಕೃತ ಕಟ್ಟಡಗಳು ಹಾಗೂ ಕೃಷಿಯೇತರ ಚಟುವಟಿಕೆಗಳಿಗೆ ಮಂಜೂರಾತಿ ನೀಡದೇ ಇರಲು ಸಂಬಂಧಪಟ್ಟವರಿಗೆ ಸೂಚಿಸುವುದು.ಅದರಂತೆ ಮೇಲ್ಕಂಡ (1) ಮತ್ತು (2)ರ ಅಂಶಗಳ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 01 ಇಎನ್‌ಜಿ 2011 ಬೆಂಗಳೂರು, ದಿನಾಂಕ:24.07.2014.**

ಮೇಲೆ ವಿವರಿಸಲಾಗಿರುವ ಪ್ರಸ್ತಾವನೆಯ ಅಂಶಗಳ ಹಿನ್ನೆಲೆಯಲ್ಲಿ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ರಕ್ಷಣೆ ಮತ್ತು ಸಂರಕ್ಷಣೆಗಾಗಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಪರಸರ (ನಿಯಂತ್ರಣ) ಕಾಯ್ದೆ 1986ರ ಕಲಂ 5ರಡಿ ಹೊರಡಿಸಿದ್ದ ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 215 ಇಎನ್‌ವಿ 2000 ದಿನಾಂಕ:18.11.2003ನ್ನು ಹಿಂಪಡೆದು ಆದೇಶಿಸಿದೆ.

ಏತನ್ಮಧ್ಯೆ ಸರ್ಕಾರವು ಈ ವಿಷಯ ಕುರಿತು ಸಂಪೂರ್ಣವಾಗಿ ಪುನರ್ ಪರಿಶೀಲಿಸಿ ಹೊಸದಾಗಿ ಅಧಿಸೂಚನೆ ಹೊರಡಿಸುವವರೆಗೂ ಸಂಬಂಧಪಟ್ಟ ಪ್ರಾಧಿಕಾರ/ಇಲಾಖೆಗಳು ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ಯಾವುದೇ ಹೊಸ ಅನಧಿಕೃತ ಕಟ್ಟಡಗಳು ಹಾಗೂ ಕೃಷಿಯೇತರ ಚಟುವಟಿಕೆಗಳಿಗೆ ಮಂಜೂರಾತಿ ನೀಡಬಾರದೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಹೆಚ್. ಅನಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,(ಪರಿಸರ ಮತ್ತು ಜೀವಿಶಾಸ್ತ್ರ)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

PR.669
SC- 200

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59